

# ಸಿದ್ಧಗಂಗಾ



ಸಂಪುಟ : ೩೯ | ಮೇ ೨೦೦೩ | ಸಂಚಿಕೆ : ೫

ಏಪ್ರಿಲ್ ೭ರಂದು ಶ್ರೀಮಠದಲ್ಲಿ ನಡೆದ ಗುರುವಂದನ ಮಹೋತ್ಸವವನ್ನು ಜಾರ್ಖಂಡ್ ರಾಜ್ಯದ ಘನತೆವೆತ್ತ ರಾಜ್ಯಪಾಲರಾದ ಸನ್ಮಾನ್ಯ ಶ್ರೀ ಎಂ. ರಾಮಾ ಜೋಯಿಸ್ ಅವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು, ಸುತ್ತೂರು ಮತ್ತು ದೇಗುಲ ಮಠದ ಶ್ರೀಗಳು, ಕೇಂದ್ರ ಸಚಿವರಾದ ಶ್ರೀ ಅನಂತಕುಮಾರ್, ಶ್ರೀ ವಿ. ಶ್ರೀನಿವಾಸ ಪ್ರಸಾದ್, ಉನ್ನತ ಶಿಕ್ಷಣ ಸಚಿವ ಡಾ. ಜಿ. ಪರಮೇಶ್ವರ್, ರಾಜ್ಯಸಭಾ ಸದಸ್ಯ ಶ್ರೀ ಎಂ.ವಿ. ರಾಜಶೇಖರನ್ ಅವರು ಉಪಸ್ಥಿತರಿದ್ದರು.

ಪರಮಪೂಜ್ಯ ಶ್ರೀ ಶ್ರೀಗಳವರಿಂದ ಗಣ್ಯರಿಗೆ ಆಶೀರ್ವಾದ





ಮುಖಪುಟ
ಶ್ರೀಮಠದಲ್ಲಿ ಗುರುವಂದನ ಮಹೋತ್ಸವದ ಉದ್ಘಾಟನೆ ಮತ್ತು ಶ್ರೀಗಳವರಿಂದ ಗಣ್ಯರಿಗೆ ಆಶೀರ್ವಾದ


ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕರು
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೨೬೦೪೦೮೭


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಅವಾವ ಕಾಯಕವ ಮಾಡಿದರು ಬಸವೇಶ
ಅವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೩೯ | ಮೇ ೨೦೦೩ | ಸಂಚಿಕೆ : ೫


## ಒಳಪುಟಗಳಲ್ಲಿ..........


೨. ಸಂಪಾದಕೀಯ
೩. ಶ್ರೀವಾಣಿ
೪. ಸಿದ್ಧಲಿಂಗೇಶ್ವರ ವಚನ – ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ
೫. ತ್ರಿವಿಧ ದಾಸೋಹಮೂರ್ತಿ ಪರಮಪೂಜ್ಯ
ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ
ತೊಂಬತ್ತಾರನೇ ಗುರುವಂದನ ಮಹೋತ್ಸವ
ವರದಿ : ಎಚ್.ಎಸ್. ಸಿದ್ಧಗಂಗಪ್ಪ
೨೨. ಸಾರಸ್ವತಲೋಕದ ಸ್ವಾತಿಮುತ್ತು
ಶ್ರೀ ಮತ್ತೂರು ಕೃಷ್ಣಮೂರ್ತಿ
೨೫. ವಚನಗಳ ವಿಶ್ಲೇಷಣೆ – ಸಂ. ಡಾ. ಎಲ್. ಬಸವರಾಜು
೨೬. ವಚನ ಸಾಹಿತ್ಯ ಪ್ರಸ್ತುತತೆ – ಡಾ. ಜಿ.ಬಿ. ವಿಸಾಜಿ
೨೮. ಸಮಾರಂಭ
೨೯. ಕ್ಷೇತ್ರವಾರ್ತೆ
೩೧. ಜಾಹಿರಾತು



| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/- |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೬೦೦/- |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೫.೦೦ |



## ಬಳಲಿದ ಶ್ರೀಗಳವರ ಶಿವಕಾಯ ಮತ್ತು ಬಸವ ಜಯಂತಿ ...

ಕೆಲವು ದಿನಗಳ ಹಿಂದೆ ಶ್ರೀಮಠಕ್ಕೆ ಹೋಗಿದ್ದ ಸಂದರ್ಭ. ಪೂಜ್ಯ ಶ್ರೀಗಳವರನ್ನು ಕಾಣಬೇಕಾಗಿತ್ತು. ಶ್ರೀಗಳವರು ಕಾರ್ಯಾಲಯದಲ್ಲಿದ್ದರು. ಅವರೆದುರಿಗೆ ಒಬ್ಬ ಹಣ್ಣು ಹಣ್ಣಾದ ವೃದ್ಧರು ಕೈಮುಗಿದು ನಿಂತಿದ್ದರು. ಅವರ ಕಣ್ಣಲ್ಲಿ ನೀರಿಳಿಯುತ್ತಿತ್ತು. ಮುಖವೆಲ್ಲ ಬಾಡಿ ಬತ್ತಿ ಹೋಗಿತ್ತು. ಎಂಬತ್ತು ವರ್ಷವಿರಬಹುದು ಅವರಿಗೆ. ಶ್ರೀಗಳವರು ಅವರನ್ನುದ್ದೇಶಿಸಿ ಏಕೆ ಅಳುತ್ತಿದ್ದೀರಿ? ಎಂದು ಕೇಳಿದರು. ವೃದ್ಧರು ತುಂಬಾ ಕಷ್ಟದಲ್ಲಿರಬಹುದು ಎಂಬ ಭಾವನೆ ಶ್ರೀಗಳವರದಾಗಿತ್ತು. ಅದಾಗಿರಲಿಲ್ಲ. ಆ ಹಿರಿಯ ಜೀವ ಮೃದುವಾಗಿ ನುಡಿಯಿತು. ''ಬುದ್ದೀ, ತಮಗೆ ಆರೋಗ್ಯ ಸರಿಯಿಲ್ಲ ಎಂದು ಕೇಳಿದೆ, ನೋಡೋಣವೆಂದು ಬಂದೆ, ವಾರವಾಯಿತು. ತಮ್ಮ ಅನಾರೋಗ್ಯ ನಿಮಿತ್ತ ಭೇಟಿಮಾಡಲು ಸಾಧ್ಯವಾಗದು ಎಂದು ಸೇವಾಸಿಬ್ಬಂದಿಯವರು ಹೇಳಿದರು. ಮನಸ್ಸು ತಡೆಯಲಿಲ್ಲ. ಏನೇ ಆಗಲಿ, ಎಷ್ಟೇ ದಿನವಾಗಲಿ ತಮ್ಮ ಆರೋಗ್ಯಮುಖಿಯಾದ ಪಾದದರ್ಶನ ಮಾಡಿಯೇ ಹೋಗೋಣವೆಂದು ಕಾದೆ. ಇಂದು ಆ ಭಾಗ್ಯ ಲಭಿಸಿತು. ಬರುತ್ತೇನೆ ಬುದ್ಧಿ''- ಎಂದು ನಮಸ್ಕರಿಸಿ ತೆರಳಿದರು. ಶ್ರೀಗಳವರು ಮಂತ್ರಮುಗ್ಧರಾದಂತೆ ಕಂಡುಬಂದರು.

ನಿಜ ಕಳೆದ ಕೆಲವು ದಿನಗಳಿಂದ ಶ್ರೀಗಳವರ ಶಿವಕಾಯ ಬಳಲಿತು. ವೈದ್ಯರು ತುಂಬ ತುಂಬಾ ಜಾಗರೂಕರಾಗಿ ಉಪಚರಿಸಿದರು. ಕಣ್ಣಲ್ಲಿ ಕಣ್ಣಿಟ್ಟು ನೋಡಿಕೊಂಡರು. ಅಭಿಮಾನಿಗಳು, ಗಣ್ಯಮಾನ್ಯರು, ಅಧಿಕಾರಿಗಳು, ಹಳೆಯ ವಿದ್ಯಾರ್ಥಿಗಳು, ಆತಂಕಗೊಂಡೇ ಬಂದು ಹೋದರು. ಸುತ್ತೂರು ಶ್ರೀಗಳು, ದೇಗುಲಮಠದ ಶ್ರೀಗಳು, ಇನ್ನೂ ಕೆಲವು ಮಠಾಧೀಶರು, ಸಚಿವರು, ಶಾಸಕರು, ಸಂಸದರು ಶ್ರೀಗಳವರ ಅನಾರೋಗ್ಯ ತಿಳಿದು ಧಾವಿಸಿಬಂದರು. 'ಪ್ರಯಾಣ, ಪ್ರವಾಸ, ಇನ್ನು ಬೇಡಿ ಬುದ್ದೀ' ಎಲ್ಲ ನಿಲ್ಲಿಸಿಬಿಡಿ ಎಂದರು. ದೇಹಕ್ಕೂ ಒಂದು ಧರ್ಮವಿದೆ ಬುದ್ದೀ, ವಯಸ್ಸಿನೊಂದಿಗೆ ಅದು ವರ್ತಿಸುತ್ತದೆ. ತಾವು ಮಾಡುತ್ತ ಬಂದಿರುವ ಸೇವೆ ಸಾಕು ಬುದ್ದೀ, ನಿಶ್ಚಿಂತವಾಗಿ ಶ್ರೀಮಠದಲ್ಲಿ ಪೂಜೆಮಾಡಿಕೊಂಡಿದ್ದರೆ ಸಾಕು'' – ಎಂದೆಲ್ಲ, ಬಂದವರು ತಮ್ಮ 'ಪ್ರೀತಿ'ಯನ್ನು ವ್ಯಕ್ತಪಡಿಸಿದರು. ಎಲ್ಲರ ಮಾತನ್ನೂ ಶ್ರೀಗಳು ಕೇಳಿದರು. 'ಆಗಲಿ' ಎಂದರು. ವೈದ್ಯರ ಮಾರ್ಗದರ್ಶನದಲ್ಲಿ ದೇಹದ ಆರೈಕೆಯನ್ನು ಗಮನಿಸುತ್ತ ಬಂದರು. ಸುಧಾರಣೆ ಕಾಣಬಂದಿತು. ಆದರಿನ್ನೂ ನಿಶ್ಶಕ್ತಿ ಕಡಿಮೆಯಾಗಿಲ್ಲ. ಮತ್ತೆ ಶ್ರೀಗಳವರ ಮಾಮೂಲಿ ದಿನಚರಿ ನಡೆದಿದೆ.

ಬಸವ ಜಯಂತಿ ರಾಜ್ಯದೆಲ್ಲೆಡೆ ಆಚರಿತವಾಗುತ್ತಿದೆ. ದೆಹಲಿಯ ಸಂಸತ್‌ಭವನದ ಎದುರು ಬಸವೇಶ್ವರರ ಪುತ್ಥಳಿಯನ್ನು ಸ್ಥಾಪಿಸುವುದರ ಮೂಲಕ ಬಸವ ಸಂಸ್ಕೃತಿಯನ್ನು ಕೇಂದ್ರ ಸರ್ಕಾರ ಗೌರವಿಸಿದೆ. ಅದಕ್ಕಾಗಿ ಅಭಿನಂದನೆಗಳನ್ನು 'ಸಿದ್ಧಗಂಗಾ' ಸಲ್ಲಿಸುತ್ತದೆ. ಈ ಹಿಂದೆ ಶ್ರೀ ಗುಂಡೂರಾಯರು ಮುಖ್ಯಮಂತ್ರಿಗಳಾಗಿದ್ದಾಗ ಬಸವ ಜಯಂತಿಯಂದು ರಜೆ ಘೋಷಿಸಿ ಗೌರವ ಸಲ್ಲಿಸಿದ್ದು, ಇದೀಗ ಕರ್ನಾಟಕ ಸರ್ಕಾರ ಸರ್ಕಾರದ ವತಿಯಿಂದ ಬಸವ ಜಯಂತಿಯನ್ನು ಆಚರಿಸುವ ನಿರ್ಣಯವನ್ನು ಕೈಗೊಂಡದ್ದಕ್ಕಾಗಿ 'ಸಿದ್ಧಗಂಗಾ' ಅಭಿನಂದನೆಗಳನ್ನು ಸಲ್ಲಿಸಲು ಸಂತೋಷಿಸುತ್ತದೆ.

ಬಸವಣ್ಣನವರಲ್ಲಿ ಜಗತ್ತಿನೆಲ್ಲ ಮಹಾಪುರುಷರ ತತ್ತ್ವಾದರ್ಶಗಳು ಮೇಳೈಸಿವೆ. ''ಗೌತಮ ಬುದ್ಧನ ದಯೆ, ವರ್ಧಮಾನ ಮಹಾವೀರನ ಸರಳತೆ, ಕ್ರಿಸ್ತನ ಅನುಕಂಪ, ಮಹಮ್ಮದನ ಕೆಚ್ಚು, ಮಹಾತ್ಮಗಾಂಧಿಯವರ ಸತ್ಯ ಹಾಗೂ ಅಹಿಂಸೆಯ ನಿಷ್ಠೆಗಳೆಲ್ಲ ಬಸವಣ್ಣನವರಲ್ಲಿ ಸಂಗಮಿಸಿದ್ದು ಒಂದು ಮಹತ್ವದ ವಿಶೇಷ. ಬಸವಣ್ಣನವರ ಜಯಂತಿಯ ಆಚರಣೆಯೆಂದರೆ ಈ ಎಲ್ಲ ಮಹಾನುಭಾವಿಗಳ ಜೊತೆಗೆ ಡಾ. ಅಂಬೇಡ್ಕರರ, ಕಾರ್ಲ್‌ಮಾರ್ಕ್ಸ್‌ನ ಜಯಂತಿಯೆಂದೇ ಭಾವಿಸಬೇಕಾಗುತ್ತದೆ.

ಶ್ರೀ ಸಿದ್ಧಗಂಗಾ ಮಠ ಬಸವತತ್ತ್ವದ ಪ್ರಚಾರಕ್ಕಾಗಿಯೇ ಗ್ರಾಮಾಂತರ ಬಸವ ಜಯಂತಿ ಯೋಜನೆಯನ್ನು ೧೯೭೪ರಿಂದ ನಡೆಸಿಕೊಂಡು ಬರುತ್ತಿದೆ. ಕರ್ನಾಟಕ, ತಮಿಳುನಾಡು, ಮಹಾರಾಷ್ಟ್ರ, ಆಂಧ್ರರಾಜ್ಯಗಳಲ್ಲಿ ೬೫೦ಕ್ಕೂ ಹೆಚ್ಚು ಕಾರ್ಯಕ್ರಮಗಳನ್ನು ನಡೆಸಿದ ತೃಪ್ತಿ ಸಂಸ್ಥೆಯದಾಗಿದೆ. ಯೋಜನೆಯ ಪ್ರಮುಖ ಮುಖ 'ಶ್ರೀ ಜಗಜ್ಯೋತಿ ಬಸವೇಶ್ವರ' ನಾಟಕದ ಪ್ರದರ್ಶನ. ಗ್ರಾಮೀಣ ಪವಿತ್ರಾತ್ಮರಿಗೆ ಬಸವ ತತ್ವಗಳ ಪರಿಚಯಿಸುವ ನಮ್ರ ಪ್ರಯತ್ನ. ಶ್ರೀಗಳವರ ದೂರದೃಷ್ಟಿ – ಬೇರಿಗೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ' ಎಂಬ ಅಣ್ಣನವರ ನುಡಿಯಲ್ಲಿ ವಿಶ್ವಾಸ.

''ಬಸವಣ್ಣ ಒಪ್ಪುವಂತೆ ಒಗೆತನವ ಮಾಡುವ'' ಸಂಕಲ್ಪ ನಮ್ಮದಾಗಲಿ ಎನ್ನುತ್ತದೆ 'ಸಿದ್ಧಗಂಗಾ'.

– ಸಂಪಾದಕ







## ಬಸವಣ್ಣನವರು

ಬಸವಣ್ಣನವರು ಮಹಾಮಾನವತಾವಾದಿಗಳು, ಆತ್ಮವಿಶ್ವಾಸದ ವಿನಯಸಮುದ್ರರು. ತಮ್ಮಿಚ್ಛೆಗೆ ಬಾರದ ಯಾವೊಂದು ವಿಚಾರದಲ್ಲೂ ಲೋಕವ್ಯವಹಾರದೊಡನೆ ರಾಜಿಗೆ ಒಪ್ಪದೆ ಬಾಳಿದವರು. ಅದಕ್ಕಾಗಿ ಅಧಿಕಾರವನ್ನು ತ್ಯಜಿಸಿದವರು. ಸತ್ಯದ ಕೂರಲಗನ್ನು ಹಿಡಿದು ನಡೆದವರು. ಲೋಕ ವಿಗುರ್ಭಣೆಗೆ ಅಂಜದೆ ಅಳುಕದೆ ನಿಂತವರು. ತಮ್ಮ ಮೇಲೆ ಬಂದ ಅಪವಾದಗಳಿಗೆ ನೇರವಾಗಿ ಉತ್ತರೊಟ್ಟ ಧೀಮಂತಿಕೆ ಅವರದು. ತಮ್ಮ ಅಂತರಂಗವನ್ನು ಲೋಕದೆದುರಿಗೆ ತೆರೆದಿಟ್ಟ ಬಸವಣ್ಣನವರು ''ಎನಗಿಂತ ಕಿರಿಯರಿಲ್ಲ'' ಎಂದೇ ನಂಬಿನಡೆದ ಆದರ್ಶಶೀಲರು. ಧರ್ಮವನ್ನು, ದೇವರನ್ನು, ಅವರು ಗ್ರಂಥಗಳಲ್ಲಿ ಗುಡಿಗಳಲ್ಲಿ ಕಾಣಲಿಲ್ಲ. ದೀನರಲ್ಲಿ, ದಲಿತರಲ್ಲಿ, ಅನಾಥರಲ್ಲಿ, ಅಸಹಾಯಕರಲ್ಲಿ ಕಂಡರು. 'ಉತ್ತಮ ಕುಲ'ವೆಂಬುದನ್ನು 'ಕಷ್ಟ'ವೆಂದು ಭಾವಿಸಿದರು. ಹೊಲೆಯ, ಮಾದಿಗರೆಂಬುವರನ್ನು ''ಹಿರಿಯ ಮಾಹೇಶ್ವರ''ರೆಂದು ಗೌರವಿಸಿದರು. ಸಮಯ ಪ್ರಜ್ಞೆಯಲ್ಲಿ ಅವರಷ್ಟು ಎಚ್ಚರವಿದ್ದವರು ವಿರಳ. ''ಕೋಳಿ ಬಲ್ಲುದು ವೇಳೆಯ ಗುಣವ'' ಎಂದರು. ''ಕಾಗೆ ಬಲ್ಲದು ಗೋತ್ರದ ಗುಣವ'' ಎಂದ ಬಸವಣ್ಣನವರು ತಮ್ಮನ್ನು ಮಾದಾರ ಚೆನ್ನನ ಗೋತ್ರದವರೆಂದು ಕರೆದುಕೊಂಬಲ್ಲಿ ಸಂತೋಷಿಸಿದರು. ಶರಣರನ್ನು ಯಾರಾದರೂ ಗೋತ್ರನಾಮವಾವುದೆಂದು ಪ್ರಶ್ನಿಸಿದರೆ ''ಗೋತ್ರ ಮಾದಾರ ಚೆನ್ನಯ್ಯ, ಡೋಹಾರ ಕಕ್ಕಯ್ಯನೆಂಬುದು'' – ಎಂಬುದಾಗಿ ಸಮಾಜದ ಅತ್ಯಂತ ಕೆಳಸ್ತರವಾದ ದೀನರು ದಲಿತರೊಡನೆ ತಮ್ಮನ್ನು ಸಮೀಕರಿಸಿಕೊಳ್ಳುವ ಬಸವಣ್ಣನವರ ಮಾನವೀಯತೆ ದೊಡ್ಡದು.

ಬಸವಣ್ಣನವರು ನಿರಂತರ ಕ್ರಿಯಾಶೀಲರು. ಈ ಪ್ರಪಂಚದಲ್ಲಿ ಕರ್ಮವನ್ನು ಮಾಡದೆ ಕ್ರಿಯೆಯಲ್ಲಿ ನಿರತರಾಗದೆ ಬದುಕಿರುವುದು ಸಾಧ್ಯವಿಲ್ಲ. ಆರಂಭವಾಗಲಿ, ಬೆವಹಾರವಾಗಲಿ, ಪರಸೇವೆಯಾಗಲಿ, ಯಾವುದೇ ಕರ್ಮವಾಗಲಿ ಮಾಡುವುದು ತಪ್ಪಲ್ಲ. ಅದು ಕೇವಲ ಸಂಪತ್ತಿನ ಗಳಿಕೆಯಾಗದೆ, ಸತ್ಕಾರ್ಯಗಳಿಗೆ ಸತ್ಪುರುಷರಿಗೆ ಸಮಾಜಕ್ಕೆ ವಿನಿಯೋಗವಾಗುವುದಾದರೆ ಪರಸೇವೆಯೂ ಪರಮೋತ್ಕೃಷ್ಟವೇ ಆಗುತ್ತದೆ ಎಂಬುದನ್ನರಿತು ಆಚರಿಸಿದರು. ಈ ಸೃಷ್ಟಿಯನ್ನು ಶಿವನ ಸಂಪತ್ತೆಂದು ಭಾವಿಸಿದ ಭಾವಾತ್ಮರಾದ ಬಸವಣ್ಣನವರು ಶಿವನಿಂದ ಪಡೆದ ಸೊಮ್ಮ ಸಂಪತ್ತನ್ನು ಶಿವನಿಗೆ ಅರ್ಪಿಸುವ ವಿನೂತನ ವಿಧಾನವನ್ನು ದಾಸೋಹ ತತ್ವದಲ್ಲಿ ತುಂಬಿಕೊಟ್ಟರು. ದಾಸೋಹಕ್ಕಾಗಿ ಮಾಡುವ ಎಲ್ಲ ಸತ್ ಕ್ರಿಯೆಗಳೂ, ಕೆಲಸಗಳೂ 'ಕಾಯಕ' ಎಂಬುದನ್ನು ತೋರಿಸಿಕೊಟ್ಟರು. ಅವರ ಮಾನವತಾಪ್ರಜ್ಞೆ ಎಷ್ಟೊಂದು ಸೂಕ್ಷ್ಮವೆಂದರೆ ಆಕಳು-ಆಕಳಕರುಗಳು ಅಗಲಿರಬಾರದು ಎನ್ನುವಷ್ಟು ಅಪಾರ. ಸಕಲ ಜೀವರಿಗೆ ಲೇಸನ್ನು ಬಯಸಿದ ಬಸವಣ್ಣನವರ ವಿಚಾರಗಳಿಂದ ನಾವಿಂದು ಮನುಷ್ಯರಾಗಿ ಬಾಳುವ ಕಲೆಯನ್ನು ತಿಳಿಯಬೇಕಾಗಿದೆ. ಆ ದಾರಿಯಲ್ಲಿ ನಡೆಯಬೇಕಾಗಿದೆ.

❄

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಆಧಾರದೊಳಗಣ ಜ್ಯೋತಿ ಮೂಜಗವ ನುಂಗಿದ್ದ ಕಂಡೆನಯ್ಯಾ ಮೂಜಗ ಸತ್ತು, ಮೂಜಗದೊಡೆಯನುಳಿದುದು ಸೋಜಿಗವೆಂಬೆನಯ್ಯಾ ಮಹಾಲಿಂಗುರು ಶಿವ ಸಿದ್ಧೇಶ್ವರ ಪ್ರಭುವೇ !*

ಸಕಲ ತತ್ವಗಳಿಗೆ ಆಧಾರವಾದುದು ಪ್ರಾಣಲಿಂಗ. ಅದು ಶರಣಮೂಲಾಧಾರವಾಗಿ ಚತುರ್ದಳ ಕಮಲ ಕರ್ಣಿಕಾಗ್ರದಲ್ಲಿ ಬೆಳಗುತ್ತಿದೆ. ಅದು ಸ್ಥೂಲ, ಸೂಕ್ಷ್ಮ ಮತ್ತು ಕಾರಣ ತನುಗಳಲ್ಲಿ ಇಷ್ಟ, ಪ್ರಾಣ ಮತ್ತು ಭಾವವಾಗಿ, ಷಟ್ ಚಕ್ರಗಳಲ್ಲಿ ಷಡ್ವಿಧಲಿಂಗವಾಗಿ ಪ್ರಕಾಶಿಸುತ್ತ ಇರುವುದನ್ನು ಸುಜ್ಞಾನೋದಯನಾದ ಶರಣನು ಜ್ಞಾನದಿಂದರಿದನು. ಆ ಶರಣನ ಜ್ಞಾನತನುತ್ರಯ ಸಂಬಂಧವಾದ ಜೀವತ್ರಯ ಸಕಲಕರಣಗಳೆಲ್ಲ ಲಿಂಗಸಂಬಂಧದಿಂದ ನಿವೃತ್ತಿಯನ್ನು ಪಡೆದು ಲಿಂಗಸ್ವರೂಪನೆ ಆದಾಗ ಆ ಪರಶಿವಲಿಂಗವೇ ಉಳಿಯಿತೆಂಬುದು ಸೋಜಿಗವೆನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

### ಶ್ರೀವಾಣಿ

*ರಾಷ್ಟ್ರದಲ್ಲಿಂದು ಆರ್ಥಿಕವಾಗಿ ಬಡತನವಿರಬಹುದು. ಅದನ್ನು ಶ್ರಮ ದುಡಿಮೆಯಿಂದ ಅಭಿವೃದ್ಧಿಪಡಿಸಿಕೊಳ್ಳಬಹುದು. ಆದರೆ ಹೃದಯ ದಾರಿದ್ರ್ಯವಿರಬಾರದು. ದೊಡ್ಡಸ್ಥಾನಗಳಲ್ಲಿರುವವರು ದೊಡ್ಡ ದೃಷ್ಟಿಯುಳ್ಳವರಾಗಬೇಕು. ಉದಾತ್ತ ಚಿಂತಕರಾಗಬೇಕು. ಅಧಿಕಾರ, ಅಂತಸ್ತು, ಅವಕಾಶಗಳು ಬಂದಾಗ ಹಿರಿಯ ಮಾರ್ಗಾವಲಂಬಿಗಳಾಗಿ ಮುನ್ನಡೆಯಬೇಕು.*

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಮುತ್ತಿನಧವಳವೆ ಮುಕ್ಕಿಯಾಕಾಶವೆ
ಶಾಂತ ಭಾಸ್ಕರ ಕೋಟಿ ತೇಜವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲೋಕಮಾಣಿಕ್ಯವೆ ಮರು ಜವಣಿಪುಂಜವೆ
ಪಾಪಿಗಳನುದ್ಧರಿಪ ಪುಣ್ಯವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯಪ್ರಸಾದವೆ ಪ್ರಾಣ ಪ್ರಸಾದವೆ
ಜ್ಞಾನ ಪ್ರಸಾದವೆ ರೂಪಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶುದ್ಧ ಪ್ರಸಾದವೆ ಸಿದ್ಧ ಪ್ರಸಾದವೆ
ಪ್ರಸಾದವೆರೂಪಾದ ಪ್ರಸಿದ್ಧವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕರುಳಿಲ್ಲದ ಶಿವಕಲಿಯೆ ಹೂವಿಲ್ಲದ ಗಂಧವೆ
ಕಾಯಭಾವವಳಿದ ಲಿಂಗವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನಶೂನ್ಯನು ನಾನು ಜ್ಞಾನ ಸೂರ್ಯನು ನೀನು
ಮನದ ಮೈಲಿಗೆಯ ಕಳೆಯೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೆಟ್ಟಕೇಡಿಂಗೆ ಕೊನೆಯಿಲ್ಲದಾಗಿಹುದು
ಸುಟ್ಟು ನೆಟ್ಟಗೆ ಮಾಡು ಗುರು ತಾಯಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮುಗಿಲಮರೆಮಿಂಚಾದೆ ನೆಲದಮರೆ ನಿಧಿಯಾದೆ
ನಿಮ್ಮನಿಲವರಿಯದೆ ಕುರುಹಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರ ಕಾಯನೆ ಆಚಾರ ಪ್ರಾಣನೆ
ಆಚಾರೆ ಲಿಂಗವಾದವನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸತ್ಯಮುಕ್ತಿಯ ಕಳೆಯೆ ನಿತ್ಯತತ್ವದ ಇರವೆ
ಸತ್ಯ ಸುಂದರ ಶಿವರೂಪವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





### ತ್ರಿವಿಧ ದಾಸೋಹಮೂರ್ತಿ ಪರಮಪೂಜ್ಯ

# ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ತೊಂಬತ್ತಾರನೇ ಗುರುವಂದನ ಮಹೋತ್ಸವ

ವರದಿ : ಎಚ್.ಎಸ್. ಸಿದ್ಧಗಂಗಪ್ಪ




ಜಾರ್ಖಾಂಡ್ ರಾಜ್ಯದ ರಾಜ್ಯಪಾಲರಾದ ಶ್ರೀ ಎಂ. ರಾಮಾಜೋಯಿಸ್ ಅವರು ೯೬ ಜ್ಯೋತಿಗಳನ್ನು ಬೆಳಗಿಸುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು.

*ನಾಡಿನ ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತನ್ನದೇ ಆದ ವಿಶಿಷ್ಟ ಸೇವೆಯನ್ನು ಸಲ್ಲಿಸುತ್ತ ಬಂದಿರುವ ಸಿದ್ಧಗಂಗಾ ಕ್ಷೇತ್ರ ಬಡವರ, ದೀನದಲಿತರ ಪಾಲಿಗೆ ಕಲ್ಪವೃಕ್ಷವಾಗಿದೆ. ಜಾತಿ-ವರ್ಗ, ಬಡವ-ಬಲ್ಲಿದರೆನ್ನದೆ ಸಾವಿರಾರು ವಿದ್ಯಾರ್ಥಿಗಳಿಗೆ ಮುಕ್ತವಾಗಿ, ಸಮಾನವಾಗಿ ಶ್ರೀಮಠದಲ್ಲಿ ಅವಕಾಶ ಕಲ್ಪಿಸಿಕೊಟ್ಟು ಅವರ ಹೊಟ್ಟೆ ಹಾಗೂ ಜ್ಞಾನದ ಹಸಿವನ್ನು ನೀಗಿಸುವ ಪುಣ್ಯಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡಿದೆ. ಶ್ರೀ ಉದ್ದಾನ ಶಿವಯೋಗಿಗಳ ಕರಸಂಜಾತರಾಗಿ ಮಠದ ಹೊಣೆಗಾರಿಕೆಯನ್ನು ವಹಿಸಿಕೊಂಡ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಕಳೆದ ಆರು ದಶಕಗಳಿಂದ ಸದ್ದುಗದ್ದಲವಿಲ್ಲದೆ, ಲಕ್ಷಾಂತರ ದೀನದಲಿತ ಬಡ ವಿದ್ಯಾರ್ಥಿಗಳಿಗೆ ಜ್ಞಾನಜ್ಯೋತಿಯನ್ನು ಹೊತ್ತಿಸಿ ಅವರ ಭವಿಷ್ಯ ಉಜ್ವಲವಾಗುವಂತೆ ಮಾಡಿದ್ದಾರೆ. ಸಿದ್ಧಗಂಗಾ ಕ್ಷೇತ್ರದ ಕೀರ್ತಿಯನ್ನು ಅಂತರಾಷ್ಟ್ರೀಯ ಮಟ್ಟಕ್ಕೂ ಹಬ್ಬಿಸಿದ ಹಿರಿಮೆ ಪರಮಪೂಜ್ಯ ಶ್ರೀ ಶ್ರೀಗಳವರದು.*

ಕಳೆದ ಅನೇಕ ವರ್ಷಗಳಿಂದ ಪರಮಪೂಜ್ಯ ಶ್ರೀಗಳವರ ಹುಟ್ಟು ಹಬ್ಬವನ್ನು ಹಳೆಯ ವಿದ್ಯಾರ್ಥಿಗಳು, ಹಿತೈಷಿಗಳು, ಅಭಿಮಾನಿಗಳು, ಭಕ್ತರು ಸೇರಿ 'ಗುರುವಂದನ' ಕಾರ್ಯಕ್ರಮವನ್ನಾಗಿ ಆಚರಿಸುತ್ತಾ ಬಂದಿದ್ದಾರೆ. ಶ್ರೀಗಳವರಿಗೆ ತಮ್ಮ ಹುಟ್ಟು ಹಬ್ಬವನ್ನು ಆಚರಿಸಿಕೊಳ್ಳುವುದು ಇಷ್ಟವಿಲ್ಲದಿದ್ದರೂ ಹಳೆಯ ಇವರೆಲ್ಲರ ಒತ್ತಾಯ ಒತ್ತಾಸೆಗಳಿಂದ ಒಪ್ಪಿಗೆ ಸೂಚಿಸುವ ಅನಿವಾರ್ಯ ಸ್ಥಿತಿ. 'ಗುರುವಂದನ' ಒಂದು ಸಾಂಕೇತಿಕ ಮಾತ್ರ. ಪರಮಪೂಜ್ಯ ಶ್ರೀಗಳವರ ಆಶಯದಂತೆ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದ ಗಣ್ಯರನ್ನು ಸನ್ಮಾನಿಸುವ ಸತ್ ಸಂಪ್ರದಾಯವನ್ನು ಹಮ್ಮಿಕೊಂಡು ನಡೆಸಿಕೊಂಡು ಬರಲಾಗುತ್ತಿದೆ.

ಶ್ರೀಮಠದಲ್ಲಿ ಏಪ್ರಿಲ್ ೬, ಸಡಗರದ ವಾತಾವರಣ. ತಂಡೋಪತಂಡವಾಗಿ ಹಳೆಯ ವಿದ್ಯಾರ್ಥಿಗಳು, ಹಿತೈಷಿಗಳು, ಭಕ್ತರು, ಅಭಿಮಾನಿಗಳ ಮಹಾಪೂರ. ನೂತನ ವಿದ್ಯಾರ್ಥಿ ನಿಲಯದ ಎದುರಿಗೆ ನಿರ್ಮಿಸಿದ ವಿಶಾಲವಾದ ಎತ್ತರದ ವೇದಿಕೆ; ಅದಕ್ಕೆ ಹೊಂದಿಕೊಂಡಂತೆ ಬೃಹತ್ ಪ್ರಮಾಣದ ಸಾವಿರಾರು ಜನ ಕುಳಿತುಕೊಳ್ಳುವಂತೆ ಶಾಮಿಯಾನದಿಂದ ನಿರ್ಮಿಸಿದ ಸುಸಜ್ಜಿತ ಬಯಲು ಮಂದಿರ. ವೇದಿಕೆಯ ಬಲಭಾಗದಲ್ಲಿ ಎತ್ತರವಾಗಿ ನಿರ್ಮಿಸಲಾದ ವೇದಿಕೆಯಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳ ಉಪಸ್ಥಿತಿ.



ಪೂಜ್ಯ ಶ್ರೀಗಳು ಹಾಗೂ ಗಣ್ಯರನ್ನು ವೇದಿಕೆಗೆ ಮೆರವಣಿಗೆಯಲ್ಲಿ ಕರೆತರುತ್ತಿರುವುದು

ಸಮಾರಂಭದಲ್ಲಿ ಭಾಗಿಗಳಾದವರ ಮುಖದಲ್ಲಿ ಸಂತೋಷ, ಧನ್ಯತೆಯ ಭಾವನೆ.

**ಸಂದರ್ಭ** : ಲಕ್ಷಾಂತರ ಜನರ ದೀನ ದಲಿತ ಹಾಗೂ ಬಡ ಗ್ರಾಮಾಂತರ ವಿದ್ಯಾರ್ಥಿಗಳಿಗೆ ವಿದ್ಯಾದಾನದ ಮೂಲಕ ಅವರಲ್ಲಿನ ಜ್ಞಾನದ ದೀವಿಗೆಯನ್ನು ಹಚ್ಚಿ ಭವ್ಯ ಭವಿಷ್ಯವನ್ನು ರೂಪಿಸಿದ, ರೂಪಿಸುತ್ತಿರುವ ತ್ರಿವಿಧ ದಾಸೋಹಮೂರ್ತಿ, ಪರಮ ವೈರಾಗ್ಯಮೂರ್ತಿ, ಕಾಯಕಯೋಗಿ, ಮಾನವೀಯತೆಯ ಮೇರುಪರ್ವತ, ಅಭಿನವ ಬಸವಣ್ಣ, ನಡೆದಾಡುವ ದೇವರೆಂದೇ ಪ್ರಸಿದ್ಧರಾದ ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೯೬ನೆಯ ಜನ್ಮದಿನಾಚರಣೆ 'ಗುರುವಂದನ' ಕಾರ್ಯಕ್ರಮ. ಈ ಪುಣ್ಯ ಸಮಾರಂಭದಲ್ಲಿ ಭಾಗಿಗಳಾಗಿ ತಮ್ಮ ಜೀವನ ಸಾರ್ಥಕಪಡಿಸಿಕೊಳ್ಳಲು ರಾಜ್ಯದ ನಾನಾ ಭಾಗಗಳಿಂದಲ್ಲದೆ ನೆರೆ ರಾಜ್ಯಗಳಾದ ಆಂಧ್ರ, ತಮಿಳುನಾಡು, ಮಹಾರಾಷ್ಟ್ರಗಳಿಂದ ಭಕ್ತರು ಅಭಿಮಾನಿಗಳು ಆಗಮಿಸಿದ್ದರು.

ಶ್ರೀಮಠದ ವಿದ್ಯಾರ್ಥಿಗಳಿಂದ ಸಾಮೂಹಿಕ ಪ್ರಾರ್ಥನೆಯಿಂದ ಕಾರ್ಯಕ್ರಮ ಪ್ರಾರಂಭವಾಯಿತು. ಶ್ರೀಮಠದ ಹಳೆಯ ವಿದ್ಯಾರ್ಥಿ ಹಾಗೂ ತುಮಕೂರು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳೂ ಆದ ಶ್ರೀ ಟಿ. ಗೋವಿಂದರಾಜು ಅವರು ಸರ್ವರನ್ನು ಸ್ವಾಗತಿಸಿದರು. ಅವರು ತಮ್ಮ ಸ್ವಾಗತ ಭಾಷಣದಲ್ಲಿ ಪರಮಪೂಜ್ಯ ಶ್ರೀಗಳವರು ಸಮಾಜಕ್ಕೆ ಸಲ್ಲಿಸುತ್ತಿರುವ ಅನನ್ಯ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿದರು.

**ಜ್ಯೋತಿ** ಬೆಳಗಿಸುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದ ಜಾರ್ಖಂಡ್ ರಾಜ್ಯದ ಘನತವೆತ್ತ ರಾಜ್ಯಪಾಲರಾದ ಶ್ರೀ ಎಂ. ರಾಮಾಜೋಯಿಸ್ ಅವರು ತಮ್ಮ ಉದ್ಘಾಟನಾ ಭಾಷಣದಲ್ಲಿ ಶ್ರೀಮಠದ ಬಹುಮುಖ ಸೇವೆಯನ್ನು ಮುಕ್ತಕಂಠದಿಂದ ಶ್ಲಾಘಿಸಿದರು. ಅವರು ''ಈ ಭವ್ಯ ಹಾಗೂ ಪುಣ್ಯ ಸಮಾರಂಭದಲ್ಲಿ ಭಾಗವಹಿಸುತ್ತಿರುವುದು ನನ್ನ ಪುಣ್ಯ; ನಾನು ಭಾಗ್ಯಶಾಲಿ.





ಇದೊಂದು ಅಪೂರ್ವ ಕಾರ್ಯಕ್ರಮ. ನಮ್ಮ ಸಮಾಜದಲ್ಲಿ ಗುರುವಿಗೆ ಅತ್ಯಂತ ಉನ್ನತವಾದ ಸ್ಥಾನವನ್ನು, ಗೌರವವನ್ನು ನೀಡಿದ್ದೇವೆ. ಬ್ರಹ್ಮ, ವಿಷ್ಣು, ಮಹೇಶ್ವರ ಈ ಮೂರು ಜನ ತ್ರಿಮೂರ್ತಿಗಳನ್ನು ಗುರುವಿನಲ್ಲಿ ಕಾಣುತ್ತೇವೆ. ಈ ಮಹಾಪುರುಷರ ದರ್ಶನದಿಂದ ನಮಗೆ ಪುಣ್ಯ ದೊರೆಯುತ್ತದೆ. ಸ್ವಾಮೀಜಿಯವರು ಅಂಧಕಾರವನ್ನು ಹೋಗಲಾಡಿಸಿ ನಮ್ಮೆಲ್ಲರನ್ನು ಮನುಷ್ಯರನ್ನಾಗಿ ಮಾಡಿರುವ ಚಂದ್ರರಾಗಿದ್ದಾರೆ' ಎಂದು ಬಣ್ಣಿಸಿದರು. 'ಪೂಜ್ಯ ಶ್ರೀಗಳವರು ಕಷ್ಟದಿಂದ, ಶಿಸ್ತಿನಿಂದ ಮಠವನ್ನು ಬೆಳೆಸಿದ್ದಾರೆ. ನಮ್ಮ ಸಂಸ್ಕೃತಿಯಲ್ಲಿ ಅನ್ನದಾನ, ವಿದ್ಯಾದಾನ ತುಂಬಾ ವಿಶಿಷ್ಟವಾದುದು ಜಾತಿ, ವರ್ಗ ಬೇಧವಿಲ್ಲದೆ ಸುಮಾರು ಎಂಟು ಸಾವಿರ ವಿದ್ಯಾರ್ಥಿಗಳಿಗೆ ಅನ್ನದಾನ, ವಿದ್ಯಾದಾನ ಮಾಡುತ್ತಿರುವ ಇಂಥ ಕ್ಷೇತ್ರ ಮತ್ತೊಂದಿಲ್ಲ. ಒಬ್ಬ ಮನುಷ್ಯ ಮನುಷ್ಯನಾಗಿ ಬಾಳಬೇಕಾದ ವಿದ್ಯೆ ಇಲ್ಲಿ ದೊರೆಯುತ್ತಿದೆ' ಎಂದು ಶ್ಲಾಘಿಸಿದ ರಾಜ್ಯಪಾಲರು ''ಪೂಜ್ಯ ಶ್ರೀಗಳವರು ನಿಷ್ಕಾಮ ಕರ್ಮಯೋಗಿಗಳು. ನಮ್ಮ ಸಂಸ್ಕೃತಿ ಯನ್ನು ಮೃತ್ಯುಂಜಯವನ್ನಾಗಿ ಮಾಡಿದ್ದಾರೆ. ಪರಮಪೂಜ್ಯ ಶ್ರೀಗಳವರು ಬದುಕಿರುವಾಗ, ಬದುಕಿರುವ ನಾವು ನಿಜಕ್ಕೂ ಅದೃಷ್ಟವಂತರು' ಎಂದು ಹೃದಯ ತುಂಬಿ ಮಾತಾನಾಡಿದರು. ಉಚಿತ ಆಹಾರ, ಶಿಕ್ಷಣ ಮತ್ತು ವಸತಿ ನೀಡಿ ಉತ್ತಮ ಗುಣಮಟ್ಟದ ಯುವಕರನ್ನು ದೇಶಕ್ಕೆ ಕೊಡುಗೆಯಾಗಿ ನೀಡುತ್ತಿರುವ ಶ್ರೀ ಸಿದ್ಧಗಂಗಾ ಮಠದ ಸೇವೆ ಶ್ಲಾಘನೀಯ. ಸಾಮಾಜಿಕ ನ್ಯಾಯ ಕಲ್ಪಿಸುವಲ್ಲಿ ಸಿದ್ಧಗಂಗಾ ಮಠ 'ಶುದ್ಧಗಂಗಾ' ಆಗಿದೆ ಎಂದು ಕೊಂಡಾಡಿದರು.



ಶ್ರೀ ಹೆಚ್.ಎಸ್. ನೀಲಕಂಠಯ್ಯ ಮತ್ತು ಸಂಗಡಿಗರಿಂದ ವೀರಭದ್ರನ ಕುಣಿತ



ಪತ್ರಿಕಾ ಮಾಧ್ಯಮದವರು ಮತ್ತು ಪ್ರೇಕ್ಷಕರು

**ಸಮಾರಂಭಕ್ಕೆ** ಶುಭಕೋರಿ ಬಂದ ಸಂದೇಶಗಳನ್ನು ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ ಹಾಗೂ ರಾಜ್ಯದ ಹಿರಿಯ ನಿವೃತ್ತ ಪೊಲೀಸ್ ವರಿಷ್ಠಾಧಿಕಾರಿಗಳೂ ಆದ ಶ್ರೀ ಎಲ್. ರೇವಣಸಿದ್ಧಯ್ಯನವರು ವಾಚಿಸಿದರು. ರಾಷ್ಟ್ರಪತಿ, ಉಪರಾಷ್ಟ್ರಪತಿ, ಪ್ರಧಾನಮಂತ್ರಿ, ಉಪಪ್ರಧಾನಿ, ರಂಭಾಪುರಿ, ಸಿರಿಗೆರೆ, ಆದಿಚುಂಚನಗಿರಿ, ಚಿತ್ತರಗಿ, ಹಿರೇಮಠ, ಆನಂದಪುರಂ ಶ್ರೀ ಶ್ರೀಗಳವರು, ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆ ಮೊದಲಾದ ಹರಗುರು ಚರಮೂರ್ತಿಗಳು, ಗಣ್ಯರು ತಮ್ಮ ಶುಭ ಸಂದೇಶಗಳಲ್ಲಿ ಶ್ರೀಗಳವರ ಅನುಪಮ ಸೇವೆಯನ್ನು ಮುಕ್ತಕಂಠದಿಂದ ಶ್ಲಾಘಿಸಿರು



ವೇದಿಕೆಯಲ್ಲಿ ಉಪಸ್ಥಿತರಿದ್ದ ಗಣ್ಯರು

ವುದನ್ನು ಶ್ರೀ ಎಲ್. ರೇವಣಸಿದ್ಧಯ್ಯನವರು ಸಭೆಯ ಮುಂದಿಟ್ಟರು. (ಕೆಲವು ಸಂದೇಶಗಳನ್ನು ಪ್ರತ್ಯೇಕವಾಗಿ ಕೊಡಲಾಗಿದೆ).

### ಭಕ್ತಿ ಸಮರ್ಪಣೆ

ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಭಕ್ತಿ ಸಮರ್ಪಣೆ ಮಾಡುತ್ತಾ "ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸಾರ್ಥಕ ಸೇವೆಯನ್ನು ಪೂಜ್ಯ ಗುರುಗಳು ಸಲ್ಲಿಸುತ್ತಾ ಬಂದಿದ್ದಾರೆ. ಲೋಕದ ಹಿತಕ್ಕಾಗಿ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ. ಪರಮಪೂಜ್ಯ ಶ್ರೀಗಳವರು ನೀಡುತ್ತಿರುವ ಶಿಕ್ಷಣ ಆದರ್ಶಪ್ರಾಯವಾದುದು ಅನುಕರಣೀಯವಾದುದು. ನಾವು ನಮ್ಮ ಒಳಹೊರಗುಗಳನ್ನು ಶುದ್ಧಮಾಡಿಕೊಂಡು ಸಾತ್ವಿಕವಾದ ಜೀವನ ನಡೆಸಿದರೆ ಅದೇ ಪೂಜ್ಯ ಶ್ರೀಗಳವರಿಗೆ ನಾವು ಅರ್ಪಿಸುವ ಭಕ್ತಿಸಮರ್ಪಣೆ' ಎಂದು ತಿಳಿಸಿದರು.

### 'ಸಿದ್ಧಗಂಗಾ' ವಿಶೇಷ ಸಂಚಿಕೆ ಬಿಡುಗಡೆ

ಸಿದ್ಧಗಂಗಾ ವಿಶೇಷ ಸಂಚಿಕೆಯನ್ನು ಬಿಡುಗಡೆ ಮಾಡಿದ ಕೇಂದ್ರ ನಗರಾಭಿವೃದ್ಧಿ ಹಾಗೂ ಬಡತನ ನಿರ್ಮೂಲನಾ




ಕೇಂದ್ರ ಸಚಿವ ಶ್ರೀ ಅನಂತಕುಮಾರ್ ಅವರಿಂದ ಸಿದ್ಧಗಂಗಾ ವಿಶೇಷ ಸಂಚಿಕೆ ಬಿಡುಗಡೆ







सत्यमेव जयते



**A.P.J. Abdul Kalam**
New Delhi
April, 3, 2003

## MESSAGE

I am happy to learn that the Sree Siddaganga Math, Karnataka is celebrating the 96th Birthday of Dr. Sree Sree Shivakumara Swamiji, the President of Sree Siddaganga Math, Tumkur, Karnataka.

Sree Siddaganga Math is renowned Math providing service to the humanity in the field of education particularly in rural areas.

I send my greetings and felicitations to all those associated with the Math and wish the Birthday Celebrations all success.

(A.P.J. Abdul Kalam)

**Bhairon Singh Shekhawat**
Vice-President of India
New Delhi
31st March 2003






## MESSAGE

I am glad to know that the 96th Birthday of Dr. Sree Sree Sivakumara Swamiji, the President of Sree Siddaganga Math, Karnataka is being celebrated on April 6, 2003.

A great champion of India's Gurukul tradition of education, Sree Sree Shivakumara Swamiji has earned universal acclaim for his multi-faceted contributions to the lasting welfare of the society. The dedication with which Swamiji serves the poor and the downtrodden could only have been the hallmark of a divinely gifted person who combines in him the sublime power of the saint with a deep sense of sensitivity and compassion of a dedicated social worker. Truly, the Siddaganga Math under Swamiji's able guidance has been rendering yeoman services towards preserving India's unique spiritual heritage, promising to usher in a healthier and happier human society, free from ignorance, poverty and disease.

I pray for Swamiji's long, healthy and active life so that the society continues to benefit from his blessings. I wish Swamiji's birthday celebrations.

(Bhairon Sing Shekhawat)





**A.B. Vajpayee**
Prime Minister
New Delhi






## MESSAGE

I convey my 'pranams' and felicitations on the occasion of the 96th birthday celebrations of Sree Shivakumara Swamiji of the Sree Siddaganga Math, Tumkur, Karnataka.

The Math has attained its present stature due to the untiring efforts of Sree Swamiji, ever since he was initiated into the holy order in 1930. Today, the Siddaganga Gurukula provides quality education to innumerable poor children with free food and shelter, and without any discrimination of caste or creed. It runs several institutions of higher learning including the Siddaganga Institute of Technology at Tumkur.

I treasure the memories of my visits to the Math and the blessings I have received from Sree Swamiji.

On this special occasion, I wish Sree Swamiji many more years of active service to the nation.

April 1, 2003 (A.B. Vajpayee)



सत्यमेव जयते



**L.K. Advani**
Deputy Prime Minister
North Block,
New Delhi - 110001 India

## MESSAGE

I am glad to know that the **Birthday Celebrations of His Holiness Sree Shivakumara Swamiji,** the President of Sree Siddaganga Math, Tumkur District, Karnataka, are being organized on April 6, 2003. **Sree Sree Shivakumara Swamiji** has been serving Humanity in many ways. He has been instrumental in providing quality education to more than 7500 poor children with free food and shelter. The untiring efforts of Swamiji have fructified in the shape of many educational institutions for the deserving, needy and poor students.

I offer my Pranamas at the feet of His Holiness Sree Sree Sivakumara Swamiji on this occasion and wish him long life in the service of Humanity.

L. K. Advani

**(L.K. Advani)**





**ಹೆಚ್.ಡಿ. ದೇವೇಗೌಡ**
ಮಾಜಿ ಪ್ರಧಾನ ಮಂತ್ರಿಗಳು

ದಿನಾಂಕ : 6.4.2003



सत्यमेव जयते



## ಸಂದೇಶ

**ಶ್ರೀ** ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮೀಜಿಯವರ ೯೭ನೇ ಹುಟ್ಟುಹಬ್ಬದ ಅಂಗವಾಗಿ ಏರ್ಪಡಿಸಲಾಗಿರುವ **'ಗುರುವಂದನ'** ಕಾರ್ಯಕ್ರಮ ಅರ್ಥಪೂರ್ಣವಾದ ಕಾರ್ಯಕ್ರಮವಾಗಿದೆ. ವಿರಕ್ತಿಗಳಾಗಿದ್ದಾಗ್ಯೂ ಸಾಮಾಜಿಕ ಸೇವಾ ಕೈಂಕರ್ಯವನ್ನೇ ಹರಸೇವೆ ಎಂದು ಭಾವಿಸಿರುವ ಮಹಾ ಶರಣರು. ಇವರು ದಶಕ-ದಶಕಗಳ ಕಾಲದಿಂದ ನಡೆಸಿಕೊಂಡು ಬರುತ್ತಿರುವ ಜ್ಞಾನದಾಸೋಹ, ಅನ್ನದಾಸೋಹ ಮತ್ತು ಭಕ್ತಿ ದಾಸೋಹ ಕಾರ್ಯಗಳಿಂದಾಗಿ ಇಂದು ಲಕ್ಷಾಂತರ ಕುಟುಂಬಗಳ ಮನೆಯಲ್ಲಿ ದೀಪ ಉರಿಯುತ್ತಿದೆ. ತ್ರಿಕರಣ ಪೂರ್ವಕವಾಗಿ ತಮ್ಮನ್ನು ತಾವು ಸಮಾಜಕ್ಕೆ ಅರ್ಪಿಸಿಕೊಂಡಿರುವ ಸಿದ್ಧಗಂಗೆಯ ಈ ಮಹಾಚೇತನ ನಮ್ಮ ನಾಡಿನ ಹೆಮ್ಮೆ. ಮಠದ ಮಕ್ಕಳೊಂದಿಗೆ ಮಗುವಾಗಿ, ಆಧ್ಯಾತ್ಮಿಕ ಒಡನಾಡಿಗಳ ಮಧ್ಯೆ ದಿವ್ಯ ಪ್ರತಿಭೆಯಾಗಿ, ಶಿಕ್ಷಣ ತಜ್ಞರ ನಡುವೆ ಸಮಾಜ ಸುಧಾರಕರಾಗಿ, ಸಾಹಿತ್ಯ ಸಂಸ್ಕೃತಿವೇತ್ತರ ನಡುವೆ ಜಾನಪದ ವಿದ್ವಾಂಸರಾಗಿ, ವೈದ್ಯರುಗಳ ನಡುವೆ ಅಚ್ಚರಿಯ ಆಯುರ್ವೇದ ತಜ್ಞರಾಗಿ, ಏಕಾಂಗಿಯಾಗಿದ್ದು ಜನಮನಗೆದ್ದ ಯೋಗಿಯಾಗಿ ಸಮಾಜದ ರೋಗ ರುಜಿನಗಳಿಗೆ 'ಸಿದ್ಧೌಷದ' ನೀಡಬಲ್ಲ ಸಿದ್ಧಹಸ್ತರಾಗಿರುವ ಪರಮಪೂಜ್ಯರಿಗೆ ನಾಡಿನ ಜನಸಮುದಾಯದ ಪರವಾಗಿ ಸಲ್ಲಿಸಲಾಗುತ್ತಿರುವ ಗುರುವಂದನೆಯಲ್ಲಿ ಕಿರಿಯನಾದ ನನ್ನ ಭಕ್ತಿಪೂರ್ವಕ ನಮನಗಳು ಸಲ್ಲಲಿ ಎಂದು ಸಂಘಟಕರಲ್ಲಿ ಪ್ರಾರ್ಥಿಸುತ್ತೇನೆ.

**ಪೂ**ಜ್ಯರ ತ್ರಿವಿಧ ದಾಸೋಹ ಕಾರ್ಯ ಅವಿರತವಾಗಿ ಸಾಗುವಂತಾಗಲು ಹಾಗೂ ಸಮಾಜದ ಅಂಕುಡೊಂಕುಗಳನ್ನು ತಿದ್ದುವಲ್ಲಿ ಈ ಮಹಾಚೇತನ ನಮ್ಮೊಂದಿಗೆ ದೀರ್ಘಕಾಲ ಇದ್ದು ನಮಗೆ ಮಾರ್ಗದರ್ಶಕರಾಗಿರಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ. ಕಾರ್ಯಕ್ರಮಕ್ಕೆ ಸಕಲ ಯಶಸ್ಸನ್ನು ಕೋರುತ್ತೇನೆ.

**(ಹೆಚ್.ಡಿ. ದೇವೇಗೌಡ)**




ಕೇಂದ್ರ ಸಚಿವ ಶ್ರೀ ವಿ. ಶ್ರೀನಿವಾಸ ಪ್ರಸಾದ್ ಅವರಿಂದ ಸತ್ವಸಂಪನ್ನ ಶ್ರೀ ಕೃತಿ ಬಿಡುಗಡೆ

ಸಚಿವ ಶ್ರೀ ಅನಂತಕುಮಾರ್ ಅವರು ಮಾತನಾಡಿ 'ಭಾರತದ ಭವ್ಯಇತಿಹಾಸ ಮತ್ತು ಉಜ್ವಲ ಭವಿಷ್ಯರೂಪಿಸುವ ಗುರುತರವಾದ ಜವಾಬ್ದಾರಿಯ ಸಂಕೇತವಾಗಿ ಈ ಸಮಾರಂಭ ನಡೆಯುತ್ತಿದ್ದು ಸಿದ್ಧಗಂಗೆಯಲ್ಲಿ ಶಿಕ್ಷಣಗಂಗೆ, ದಾಸೋಹಗಂಗೆ ಮತ್ತು ಕಾಯಕಗಂಗೆಯ ತ್ರಿವೇಣಿ ಸಂಗಮವಾಗಿದೆ. ಅಭಿನವ ಬಸವೇಶ್ವರರೆಂದೇ ಕರೆಯಲ್ಪಡುವ ಪೂಜ್ಯ ಸಿದ್ಧಗಂಗಾ ಶ್ರೀಗಳು ಕಾಯಕದಿಂದಲೇ ಕೈಲಾಸವೆಂಬ ಹೊಸ ವ್ಯಾಖ್ಯಾನವನ್ನು ರೂಪಿಸಿ ಮಾರ್ಗದರ್ಶಿಗಳಾಗಿದ್ದಾರೆ' ಎಂದು ಬಣ್ಣಿಸಿದರು.

ಅವರು ಮುಂದುವರಿದು 'ಭವ್ಯಪರಂಪರೆಯ ಜೊತೆಗೆ ವೈಜ್ಞಾನಿಕತೆಯ ಮಿಳಿತವನ್ನು ಈ ಕ್ಷೇತ್ರದಲ್ಲಿ ಕಾಣಬಹುದಾಗಿದ್ದು ಎರಡು ಶತಮಾನಗಳನ್ನು ಹಾಗು ಮೂರು ತಲೆಮಾರುಗಳನ್ನು ಕಂಡ ಅಪರೂಪದ ಸುವರ್ಣಕೊಂಡಿ ಪರಮ ಪೂಜ್ಯ ಶ್ರೀಗಳವರು. ಕಾಯಕವೇ ಕೈಲಾಸ ಎಂಬ ತತ್ತ್ವಕ್ಕೆ ಕರ್ಮದ ಮೂಲಕ ಭಾಷ್ಯ ಬರೆದ ನಿಷ್ಕಾಮ ಕರ್ಮಯೋಗಿಗಳು' ಎಂದು ಮುಕ್ತಕಂಠದಿಂದ ಶ್ಲಾಘಿಸಿದರು.



ಕಿಕ್ಕಿರಿದ ಪ್ರೇಕ್ಷಕರು

ಶಿಕ್ಷಣದಿಂದ ಭ್ರಷ್ಟಾಚಾರ ಹಾಗೂ ಅಪರಾಧ ನಿರ್ಮೂಲನ ಮಾಡಬಹುದು. ಸಾಮಾಜಿಕ ಕ್ರಾಂತಿಯ ಮೇರುಸದೃಶರಾದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ಶಿಕ್ಷಣದ ಮೂಲಕ ದೊಡ್ಡ ಕ್ರಾಂತಿ ಮಾಡಿದ್ದಾರೆ ಎಂದು ಶ್ರೀ ಅನಂತಕುಮಾರ್ ಅವರು ಬಣ್ಣಿಸಿದರು.

### *'ಸತ್ವಸಂಪನ್ನ ಶ್ರೀ' ಕೃತಿ ಬಿಡುಗಡೆ*

ಸತ್ವಸಂಪನ್ನ ಶ್ರೀ ಬಿಡುಗಡೆ ಮಾಡಿ ಮಾತನಾಡಿದ ಕೇಂದ್ರ ಗ್ರಾಹಕ ವ್ಯವಹಾರ, ಆಹಾರ ಮತ್ತು ನಾಗರಿಕ ವಿತರಣಾ ಸಚಿವ ಶ್ರೀ ವಿ. ಶ್ರೀನಿವಾಸ್ ಪ್ರಸಾದ್ ಅವರು ''ಧರ್ಮದ ವೈಭವೀಕರಣದ ಹೆಸರಿನಲ್ಲಿ ನಡೆಯುತ್ತಿದ್ದ ಶೋಷಣೆಗೆ 'ಹನ್ನೆರಡನೇ ಶತಮಾನದಲ್ಲಿ ಬಸವಣ್ಣ ಮತ್ತು ಅವರ ಅನುಯಾಯಿಗಳು ಕಡಿವಾಣ ಹಾಕುವಲ್ಲಿ ಯಶಸ್ವಿಯಾದರು. ಧರ್ಮದ ವೈಭವೀಕರಣಕ್ಕಾಗಿಯೇ ಶ್ರಮ ಹಾಗೂ ಹಣವನ್ನು ವ್ಯಯಿಸುತ್ತಾ ಬಂದ ನಾಡಿನಲ್ಲಿ ಧರ್ಮವನ್ನು ಮನುಷ್ಯನ ಒಳಿತಿಗಾಗಿ ಬಳಸಿಕೊಂಡ ಅಪರೂಪದ ನಿದರ್ಶನ ಶ್ರೀ ಸಿದ್ಧಗಂಗಾ ಸ್ವಾಮೀಜಿಯವರು'' ಎಂದು ತಿಳಿಸಿದರು.



ಗುರುವಂದನ

ಅವರು ತಮ್ಮ ಭಾಷಣದಲ್ಲಿ ಧರ್ಮದ ಚಿಂತನೆ ನಡೆಯಬೇಕು ಎಂಬ ಧ್ಯೇಯದೊಂದಿಗೆ ಬಂದ ವೀರಶೈವ ಧರ್ಮ ತುಳಿತಕ್ಕೊಳಗಾದವರ, ದಲಿತರ ಧ್ವನಿಯಾಯಿತು. ಮಠಗಳೂ ಈ ತಳಹದಿಯಲ್ಲೇ ಕಾರ್ಯಾರಂಭ ಮಾಡಿದವು. ಈ ದಲಿತರ ಚಳುವಳಿ ಆದರ್ಶಪ್ರಾಯವಾಗಿ ಬೆಳೆಯುವ ಮೂಲಕ ಎಲ್ಲ ವರ್ಗಗಳಿಗೂ ಸಮಾನತೆ ಕಲ್ಪಿಸಿದ ಅಪರೂಪದ ಧರ್ಮ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು, ಪರಮಪೂಜ್ಯ ಶ್ರೀಗಳವರ ಆಧ್ಯಾತ್ಮಿಕ, ಧಾರ್ಮಿಕ, ಸಾಮಾಜಿಕ ಚಿಂತನೆಗಳು ಅಸಾಧಾರಣವಾದವುಗಳು. ಮಾನವೀಯ ತಳಹದಿಯ ಮೇಲೆ ಮಾನವೀಯತೆಯ ದೇಗುಲವನ್ನು ಕಟ್ಟಿದವರು ಶ್ರೀ ಸಿದ್ಧಗಂಗಾ ಶ್ರೀಗಳವರು. ನಮ್ಮ ನಾಡಿನ ಹಾಗೂ ರಾಷ್ಟ್ರದ ಸಮಸ್ತ ಜನತೆ ಎಲ್ಲರೂ ಹೆಮ್ಮೆಪಡುವಂತಹುದು ಪೂಜ್ಯರ ಸಾಧನೆ ಎಂದು ಬಣ್ಣಿಸಿದರು.




ಕೇಂದ್ರ ಸಚಿವ ಶ್ರೀ ಬಸನಗೌಡ ಪಾಟೀಲ್ ಯತ್ನಾಳ್ ಅವರಿಂದ ಬಸವೇಶ್ವರರು ಮತ್ತು ಸಮಕಾಲೀನರು ಕೃತಿ ಬಿಡುಗಡೆ

### *'ಬಸವೇಶ್ವರರು ಮತ್ತು ಸಮಕಾಲೀನರು' ಕೃತಿ ಬಿಡುಗಡೆ*

ಕೇಂದ್ರ ಜವಳಿ ಖಾತೆ ರಾಜ್ಯ ಸಚಿವ ಶ್ರೀ ಬಸನಗೌಡ ಆರ್. ಪಾಟೀಲ ಯತ್ನಾಳ್ ಅವರು 'ಶ್ರೀ ಬಸವೇಶ್ವರರು ಮತ್ತು ಸಮಕಾಲೀನರು' ಕೃತಿಯನ್ನು ಬಿಡುಗಡೆ ಮಾಡಿ ಮಾತನಾಡುತ್ತಾ ''ವೀರಶೈವ ಮಠಗಳ ಬಗ್ಗೆ ಇಂತಹ ವೇದಿಕೆಗಳಲ್ಲಿ ಮೆಚ್ಚುಗೆ ಸೂಸುವ ರಾಜಕಾರಣಿಗಳು ಬೇರೆ ವೇದಿಕೆಗಳಲ್ಲಿ ಹಗುರವಾಗಿ ಮಾತನಾಡುತ್ತಾರೆ. ಅಂತಹ ಪ್ರಯತ್ನವನ್ನು ಮಾಡದೆ ಆ ಮಠಗಳು ಸಮಾಜದ ಉನ್ನತಿಗೆ ಶ್ರಮಿಸುತ್ತಿರುವ ಬಗ್ಗೆ ಮುಕ್ತಮನಸ್ಸಿನಿಂದ ನೋಡಬೇಕೆಂದು ಸಲಹೆ ಮಾಡಿದರು. ಹಿಂದುಳಿದವರು ಮತ್ತು ದಲಿತರ ಬಗ್ಗೆಯೂ ವೀರಶೈವ ಮಠಗಳಿಗೆ ಕಾಳಜಿಯಿದೆ. ಆದ್ದರಿಂದಲೇ ಶ್ರೀ ಸಿದ್ಧಗಂಗಾ ಮಠ ತ್ರಿವಿಧ ದಾಸೋಹದಲ್ಲಿ ಯಾವುದೇ ಜಾತಿ ತಾರತಮ್ಯ ಮಾಡದೆ ಅನ್ನ, ವಿದ್ಯೆ ಮತ್ತು ಅರಿವನ್ನು ನೀಡುತ್ತಿದೆ' ಎಂದರು.



ಪ್ರೇಕ್ಷಕರು

ಶ್ರೀ ಯತ್ನಾಳ್ ಅವರು ತಮ್ಮ ಭಾಷಣದಲ್ಲಿ ಶ್ರೀಮಠದ ಅನನ್ಯ ಸೇವೆಯನ್ನು ಸ್ಮರಿಸುತ್ತಾ ''ಬಸವಣ್ಣನವರ ಆದರ್ಶಗಳನ್ನು ಅನುಷ್ಠಾನಗೊಳಿಸಿದ ಧರ್ಮ ವೀರಶೈವ ಧರ್ಮ. ಸುಮಾರು ೮ ಸಾವಿರ ವಿಧ್ಯಾರ್ಥಿಗಳಿಗೆ ಕೊಡುವ ವಿದ್ಯೆ, ಅನ್ನದಾಸೋಹ ಸಾಮಾನ್ಯವಾದುದಲ್ಲ. ವಿಶ್ವಗುರು ಬಸವಣ್ಣನವರ ಅವತಾರ ರೂಪದಲ್ಲಿ ಪರಮಪೂಜ್ಯ

ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು. ಸಮಾಜಕ್ಕೆ ವೀರಶೈವ ಮಠಗಳು ಅನನ್ಯ ಕೊಡುಗೆಯನ್ನು ನೀಡಿದೆ. ಪರಮಪೂಜ್ಯ ಶ್ರೀ ಶ್ರೀಗಳವರಿಗೆ 'ಭಾರತರತ್ನ' ಪ್ರಶಸ್ತಿಯನ್ನು ನೀಡಿ ಗೌರವಿಸಬೇಕು' ಎಂದು ತಿಳಿಸಿದರು.



ರಾಜ್ಯ ಸಭಾ ಸದಸ್ಯ ಶ್ರೀ ಎಂ.ವಿ. ರಾಜಶೇಖರನ್ ಅವರಿಂದ ವೀರಶೈವ ರಗಳೆ ಮತ್ತು ಷಟ್‌ಸ್ಥಲ ಪ್ರಕಾಶ ಕೃತಿ ಬಿಡುಗಡೆ

### 'ವೀರಶೈವ ರಗಳೆ ಮತ್ತು ಷಟ್‌ಸ್ಥಲ ಪ್ರಕಾಶ' ಕೃತಿ ಬಿಡುಗಡೆ

ರಾಜ್ಯ ಸಭಾ ಸದಸ್ಯ ಶ್ರೀ ಎಂ.ವಿ. ರಾಜಶೇಖರನ್ ಅವರು ವೀರಶೈವ ಮತ್ತು ಷಟ್‌ಸ್ಥಲ ಪ್ರಕಾಶ ಕೃತಿ ಬಿಡುಗಡೆ ಮಾಡಿ ಮಾತನಾಡುತ್ತಾ 'ಇಂದು ವಿಶ್ವದಲ್ಲೇ ಒಂದು ಉನ್ನತವಾದ ಆದರ್ಶಗಳನ್ನು ಇಟ್ಟುಕೊಂಡು ಸಮಾಜಸೇವೆ ಮಾಡುತ್ತಿರುವ ಏಕೈಕ ಮಠ ಶ್ರೀ ಸಿದ್ಧಗಂಗಾ ಮಠ. ಭಾರತ ಧಾರ್ಮಿಕ ಕ್ಷೇತ್ರದ ಧ್ರುವತಾರೆಯಾಗಿರುವ ಪರಮಪೂಜ್ಯ ಶ್ರೀಗಳವರು ಬಸವಣ್ಣನವರ ಆದರ್ಶಗಳನ್ನು ತಮ್ಮ ಜೀವದ ಉಸಿರನ್ನಾಗಿಸಿದವರು. ನಮ್ಮೆಲ್ಲರಿಗೂ ಮಾರ್ಗದರ್ಶನ ನೀಡುವ ದಿವ್ಯ ಜ್ಯೋತಿಯಾಗಿದ್ದಾರೆ' ಎಂದು ಶ್ಲಾಘಿಸಿದರು.

ರಷ್ಯನ್ ಮಹಿಳೆ ಶ್ರೀಮತಿ ಅಮ್ಮಾ ಸಾಯಿರಾ ಅವರು ಪರಮಪೂಜ್ಯ ಶ್ರೀಗಳವರನ್ನು ಕುರಿತು ರಚಿಸಿದ ಶ್ಲೋಕವನ್ನು ವಾಚಿಸುವುದರ ಮೂಲಕ ಭಕ್ತಿ ಸಮರ್ಪಣೆ ಸಲ್ಲಿಸಿದರು. ಇದೇ ಸಂದರ್ಭದಲ್ಲಿ ಒಂದು ವರ್ಣಚಿತ್ರವನ್ನು ಶ್ರೀಗಳವರಿಗೆ ಅರ್ಪಿಸಿದರು.


ಜಾರ್ಖಾಂಡ್ ರಾಜ್ಯದ ರಾಜ್ಯಪಾಲರಾದ ಶ್ರೀ ಎಂ. ರಾಮಾಜೋಯಿಸ್ ಅವರು ಶ್ರೀಗಳವರೊಂದಿಗೆ ಸಂಭಾಷಣೆಯಲ್ಲಿ ತೊಡಗಿರುವುದು

### ನುಡಿನಮನ

ನುಡಿನಮನವನ್ನು ಸಮರ್ಪಿಸಿದ ಶ್ರೀ ಶಿವಗಂಗಾ ಕ್ಷೇತ್ರದಲ್ಲಿರುವ ಮೇಳಣಗವಿ ಮಠದ ಷ.ಬ್ರ. ಶ್ರೀ ಶ್ರೀ ಮಲಯ ಶಾಂತಮುನಿ ಶಿವಾಚಾರ್ಯ ಸ್ವಾಮಿಗಳು ''ನಮ್ಮಲ್ಲಿ ಅನೇಕ ದಾಖಲೆ ಮಾಡಿದವರಿದ್ದಾರೆ. ಆದರೆ ದಾಸೋಹ ಮಾಡಿಸಿದ ದಾಖಲೆಯಿಲ್ಲ ಅದನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮಾಡಿದ್ದಾರೆ. ಪ್ರಸಾದದಲ್ಲಿ ರಾಷ್ಟ್ರೀಯ ಪ್ರಜ್ಞೆ ಇರುವುದನ್ನು ಕಾಣಬಹುದು. ಶ್ರೀ ಶ್ರೀಗಳವರು ತ್ರಿವಿಧ ದಾಸೋಹ ಮಾಡುತ್ತಾ, ಸಮಾಜಕ್ಕೆ ಅನುಪಮ ಸೇವೆ ಸಲ್ಲಿಸುತ್ತಿದ್ದಾರೆ ಎಂದು ಬಣ್ಣಿಸಿದರು.







ಗಣ್ಯರಿಂದ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿ ಸಮರ್ಪಣೆ

ಕರ್ನಾಟಕ ವಿಧಾನ ಪರಿಷತ್ ಸಭಾಪತಿಗಳಾದ ಶ್ರೀ ಬಿ.ಎಲ್. ಶಂಕರ್ ಅವರು ತಮ್ಮ ನುಡಿನಮನದಲ್ಲಿ ''ಯಾವ ಕೆಲಸ ಸರ್ಕಾರದಿಂದ ಮಾಡಲು ಸಾಧ್ಯವಾಗುತ್ತಿಲ್ಲವೋ ಅಂತಹ ಕೆಲಸವನ್ನು ವೀರಶೈವ ಮಠಗಳು ಅದರಲ್ಲೂ ವಿಶೇಷವಾಗಿ ಶ್ರೀ ಸಿದ್ಧಗಂಗಾ ಮಠ ಮಾಡುತ್ತಿದೆ. ಪ್ರಪಂಚದಲ್ಲಿ ಇಂದು ಹಿಂಸೆ ತಾಂಡವವಾಡುತ್ತಿದೆ. ಈ ಸಂದರ್ಭದಲ್ಲಿ ನಾವಿಂದು ಗುರುವಂದನೆಯನ್ನು ಆಚರಿಸುತ್ತಿದ್ದೇವೆ. ಪರಮಪೂಜ್ಯ ಶ್ರೀಗಳವರ ನೇತೃತ್ವ ಹಾಗೂ ಮಾರ್ಗದರ್ಶನ ದೇಶಕ್ಕೆ ಇಂದು ಅಗತ್ಯವಾಗಿ ಬೇಕಾಗಿದೆ. ಶ್ರೀಗಳವರು ಕನಸನ್ನು ಮಾತ್ರ ಕಾಣಲಿಲ್ಲ, ಕನಸನ್ನು ನನಸನ್ನಾಗಿ ಮಾಡಿದರು. ಬಡವರಿಗೆ, ದೀನದಲಿತರಿಗೆ ಪೂಜ್ಯ ಶ್ರೀಗಳವರು ಸೂರ್ಯನಿದ್ದ ಹಾಗೆ'' ಎಂದು ಹೃದಯತುಂಬಿ ಶ್ಲಾಘಿಸಿದರು.


ಸಮಾರಂಭದಲ್ಲಿ ಹರಗುರು ಚರಮೂರ್ತಿಗಳು

ಉನ್ನತ ಶಿಕ್ಷಣ ಸಚಿವ ಡಾ. ಜಿ. ಪರಮೇಶ್ವರ್‌ರವರು ನುಡಿ ನಮನದಲ್ಲಿ ''ಸೂರ್ಯನಿಗೆ ಸೂರ್ಯ. ಚಂದ್ರನಿಗೆ ಚಂದ್ರ, ಪರಮಪೂಜ್ಯ ಶ್ರೀಗಳವರಿಗೆ ಶ್ರೀಗಳೇ ಸಾಮ್ಯ. ಬಸವಣ್ಣನವರು



ಪರಮಪೂಜ್ಯ ಶ್ರೀ ಶ್ರೀಗಳರಿಂದ ಶ್ರೀ ಎಂ. ರಾಮಾ ಜೋಯಿಸ್ ಅವರಿ ಸನ್ಮಾನ

ಸಮಾಜದ ಅಂಕುಡೊಂಕುಗಳನ್ನು ನಿವಾರಣೆ ಮಾಡಲು ಪ್ರಯತ್ನಿಸಿದರು. ಆ ಪ್ರಯತ್ನವನ್ನು ಶ್ರೀಗಳವರು ಮುಂದುವರಿಸುತ್ತಿದ್ದಾರೆ. ಎಲ್ಲ ವರ್ಗದ ವಿದ್ಯಾರ್ಥಿಗಳಿಗೆ ಯಾವುದೇ ಭೇದಭಾವವಿಲ್ಲದೆ ಇದೊಂದು ಬೃಹತ್ ಪ್ರಮಾಣದಲ್ಲಿ ಮಾಡುತ್ತಿರುವ ಕೆಲಸ ಇಡೀ ರಾಷ್ಟ್ರದಲ್ಲೇ ಎಲ್ಲೂ ಕಂಡು ಬರುವುದಿಲ್ಲ. ಪರಮಪೂಜ್ಯರಿಗೆ ರೈತರ ಬಗ್ಗೆ, ಕೃಷಿಯ ಬಗ್ಗೆ ಇರುವ ಪ್ರೀತಿ ಅನನ್ಯವಾದುದು. ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನವನ್ನು ನಡೆಸುವುದರ ಮೂಲಕ ದಾರಿದೀಪವಾಗಿದ್ದಾರೆ'' ಎಂದು ಕೊಂಡಾಡಿದರು.

ಶ್ರೀ ಬಸನಗೌಡ ಪಾಟೀಲ್ ಯತ್ನಾಳ್ ಅವರು ಪ್ರಸ್ತಾಪಿಸಿದ 'ಭಾರತರತ್ನ' ಪ್ರಶಸ್ತಿಯ ಬಗ್ಗೆ ತಮ್ಮ ಸಹಮತವನ್ನು ವ್ಯಕ್ತಗೊಳಿಸಿದ ಡಾ. ಜಿ. ಪರಮೇಶ್ವರರವರು ಪೂಜ್ಯರಿಗೆ 'ಭಾರತರತ್ನ' ಪ್ರಶಸ್ತಿಯನ್ನು ನೀಡುವುದರಿಂದ ಪ್ರಶಸ್ತಿಗೆ ಹೆಚ್ಚು ಗೌರವ ಬರುತ್ತದೆ ಎಂದು ತಿಳಿಸಿದರು.

**ಶಾ**ಸಕರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ ಅವರು ಮಾತನಾಡಿ ''ಪರಮಪೂಜ್ಯರು ನಾಡಿಗೆ, ರಾಷ್ಟ್ರಕ್ಕೆ ಸಲ್ಲಿಸುತ್ತಿರುವ ಸೇವೆ ವಿಶ್ವಮಾನ್ಯವಾದುದು. ಶ್ರೀಗಳವರಿಗೆ 'ಭಾರತರತ್ನ' ಪ್ರಶಸ್ತಿ ಕೊಡುವುದು ನಮಗೆ ನಾವೇ ಗೌರವಿಸಿಕೊಂಡಂತೆ. ಶ್ರೀಗಳವರ ಸಾಧನೆ ನಮ್ಮ ಕಣ್ಮುಂದೆ ಇದೆ. ಕಾನೂನುಗಳನ್ನು ಮಾಡುವುದರಿಂದ ಸಮಾಜದ ಹೃದಯ ಪರಿವರ್ತನೆ ಸಾಧ್ಯವಿಲ್ಲ. ಹೃದಯಗಳನ್ನು ಪರಿವರ್ತನೆ ಮಾಡುವ ಕೆಲಸ ಆಗಬೇಕು. ಶ್ರೀಗಳವರು ಹೃದಯ ಪರಿವರ್ತನೆ ಮಾಡುತ್ತಿದ್ದಾರೆ. ಅವರ ಶ್ರೀವಾಣಿಯಿಂದ ನಾನು ಪ್ರೇರಣೆ ಪಡೆದಿದ್ದೇನೆ'' ಎಂದು ತಿಳಿಸಿದ ಶ್ರೀ ಪಿ.ಜಿ.ಆರ್. ಸಿಂಧ್ಯಾ ಅವರು ಸಿದ್ಧಗಂಗಾ ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ಶ್ರೀವಾಣಿಯನ್ನು ಸಭೆಯ ಮುಂದೆ ವಾಚಿಸಿ, ಪ್ರತಿಯೊಬ್ಬರು ಶ್ರೀವಾಣಿಯನ್ನು ಅನುಷ್ಠಾನಗೊಳಿಸಿದ್ದೇ ಆದರೆ ಸಮಾಜ ಉತ್ತಮಟ್ಟಕ್ಕೇರುತ್ತದೆ ಎಂದು ಹೇಳಿದರು.

**ಮಾ**ಜಿ ಲೋಕಸಭಾ ಸದಸ್ಯ ಶ್ರೀ ಸಿ. ನಾರಾಯಣ ಸ್ವಾಮಿ ಅವರು ''ಪರಮಪೂಜ್ಯ ಶ್ರೀ ಶ್ರೀಗಳವರು

## ಶುಭ ಸಂದೇಶ

ನಡೆದಾಡುವ ದೇವರೆಂದೇ ಖ್ಯಾತಿ ಪಡೆದ ಸಿದ್ಧಗಂಗಾಕ್ಷೇತ್ರದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಿಗೆ ಇದೀಗ ೯೬ರ ಜನ್ಮದಿನೋತ್ಸವದ ಸಂಭ್ರಮ. ಕರ್ತವ್ಯದ ಕಾಲು ದಾರಿ ಕೀರ್ತಿಯ ಹೆದ್ದಾರಿ ಎಂದು ತಿಳಿದು ಬದುಕಿನುದ್ದಕ್ಕೂ ಕ್ರಿಯಾಶೀಲರಾಗಿ ಕೆಲಸ ಮಾಡಿದ್ದಾರೆ. ಧರ್ಮ, ಸಾಹಿತ್ಯ, ಕಲೆ, ಸಂಸ್ಕಾರ, ಸದ್ವಿಚಾರಗಳನ್ನು ಬಳಸಿದ ಕೀರ್ತಿ ಇವರದು. ಸಾವಿರಾರು ವಿದ್ಯಾರ್ಥಿಗಳಿಗೆ ಅನ್ನದಾನ ಮಾಡಿ ಲಕ್ಷಾಂತರ ವಿದ್ಯಾರ್ಥಿಗಳ ಬಾಳಿಗೆ ಬೆಳಕನ್ನು ನೀಡಿದರು. ಸರಳರೂ, ಸಾತ್ವಿಕರೂ ಮತ್ತು ಎಲ್ಲರ ಪ್ರೀತ್ಯಾದಾರಗಳಿಗೆ ಪಾತ್ರರಾಗಿರುವ ಶ್ರೀಗಳವರ ೯೬ನೇ ಜನ್ಮದಿನೋತ್ಸವ ಅತ್ಯಂತ ವಿಶಿಷ್ಟಪೂರ್ಣವಾಗಿ ಆಚರಿಸಲಿರುವುದೆ ಸನ್ನಿಧಿಗೆ ಸಂತೋಷ ತಂದಿದೆ. ನೂರಾರು ವರುಷ ಅವರು ಬದುಕಿ ಬಾಳಿ ಜನಸಮುದಾಯಕ್ಕೆ ಮತ್ತು ನಾಡಿಗೆ ಅವರ ಸೇವೆ ಸಿಗುವಂತಾಗಲಿ. ಪರಮಾತ್ಮನು ಹಾಗೂ ಶ್ರೀ ಜಗದ್ಗುರು ರೇಣುಕಾದಿ ಪಂಚ ಆಚಾರ್ಯರು, ಬಸವಾದಿ ಶಿವಶರಣರು ಎಲ್ಲ ರೀತಿಯ ಶ್ರೇಯಸ್ಸನ್ನುಂಟುಮಾಡಲೆಂದು ಹಾರೈಸುತ್ತೇವೆ.

ಶ್ರೀ ಜಗದ್ಗುರು ರಂಭಾಪುರೀ ವೀರಸಿಂಹಾಸನ ಮಹಾಪೀಠ
ಶ್ರೀ ರಂಬಾಪುರೀ ಜಗದ್ಗುರುಗಳು
ಬಾಳೆಹೊನ್ನುರು





## ಶುಭ ಸಂದೇಶ

*ಅನುಭಾವದ ಅನರ್ಘ್ಯ ಆಸ್ತಿಯಾಗಿರುವ, ಮಹಾ ಮೇಧಾವಿಗಳಾಗಿರುವ ಪೂಜ್ಯರಾದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಜಂಗಮಸ್ಥಾನವನ್ನಲಂಕರಿಸಿ, ಸರ್ವಲೋಕೋಪಕಾರಕ್ಕಾಗಿ ಗಂಧದ ಕೊರಡಿನಂತೆ ತಮ್ಮನ್ನು ತೇಯ್ದುಕೊಂಡು, ಲೋಕವನ್ನು ಸುಗಂಧಭರಿತಗೊಳಿಸಿದವರು. ಬಸವಾದಿ ಪ್ರಮಥರು ನುಡಿದು, ನಡೆದು ತೋರಿದ ''ಸಕಲ ಜೀವಾತ್ಮರಿಗೆ ಲೇಸ ಬಯಸುವ'' ಬಯಕೆಯನ್ನು ತಲೆಯ ಮೇಲೆ ಹೊತ್ತು, ಕಳೆದ ಏಳು ದಶಕಗಳಿಂದ ದಣಿವರಿಯದೇ ದುಡಿದವರು. ದೀನದಲಿತೋದ್ಧಾರಕ್ಕಾಗಿ ಶ್ರಮಿಸಿದವರು. ಜೀವನದ ಕಷ್ಟ ಕಾರ್ಪಣ್ಯಗಳಲ್ಲಿ ನೊಂದು ಬೆಂದವರನ್ನು ಸಂತೈಸಿ, ಮುನ್ನಡೆಸಿದವರು. ಲಕ್ಷಾಂತರ ಬಡಮಕ್ಕಳ ಪೋಷಣೆಯ ಭಾರ ಹೊತ್ತು, ಮಠದ ಉಚಿತ ವಿದ್ಯಾರ್ಥಿನಿಲಯದಲ್ಲಿ ಅವರಿಗೆ ಉಚಿತ ಅಶನ, ವಸತಿ ಒದಗಿಸಿ, ವಿದ್ಯಾಬುದ್ಧಿ ಕಲಿಸಿ, ಜೀವನದಲ್ಲಿ ತಲೆಯೆತ್ತಿ ಬಾಳುವ ಮಾರ್ಗ ತೋರಿಸಿದವರು. ಅನಾಥರಿಗೆ ಅನ್ನವಿಕ್ಕಿ ಸಂತುಷ್ಟಗೊಳಿಸಿದವರು. ಧಾರ್ಮಿಕ, ಆಧ್ಯಾತ್ಮಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮಾಡಿದ ಅನುಪಮ ಸಾಧನೆ ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ತನ್ನದೇ ಆದ ದಾಖಲೆ ಸ್ಥಾಪಿಸಿದೆ. ಸಿದ್ಧಗಂಗಾ ಕ್ಷೇತ್ರದಲ್ಲಿ ನೂರಾರು ವರ್ಷಗಳಿಂದ ಅವಿಚ್ಛಿನ್ನವಾಗಿ ನಡೆದುಬಂದಿರುವ ದಾಸೋಹಕ್ರಿಯೆ ಚರಿತ್ರಾರ್ಹವಾಗಿದೆ.*

*''ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ, ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷ, ವಿಷಯದಲ್ಲಿ ಉದಾಸೀನ, ಭಾವದಲ್ಲಿ ದಿಗಂಬರ, ಜ್ಞಾನದಲ್ಲಿ ಪರಮಾನಂದ ನೆಲೆಗೊಂಡ, ''ಪೂಜ್ಯರಾದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ದಿವ್ಯಚೇತನ, ಮಾಡಿದ ಸಾಧನೆ, ಏರಿದ ಎತ್ತರ, ಪಡೆದ ಸಿದ್ಧಿಗಳ ಸಮಗ್ರ ವ್ಯಕ್ತಿತ್ವವನ್ನು ನಿರೂಪಿಸುವಲ್ಲಿ ಶಬ್ದ ಸೋತು ಶರಣಾಗುತ್ತದೆ. ಮಾತು ಮೌನವಾಗುತ್ತದೆ. ತಮ್ಮ ವಿಶಿಷ್ಟ ಕರ್ತೃತ್ವ ಶಕ್ತಿಯ ಪ್ರಖರತೆಯಿಂದ, ನಿರಂತರ ಲೋಕಕಲ್ಯಾಣ ಕಾರ್ಯದಲ್ಲಿ ನಿಮಗ್ನವಾಗಿರುವ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ನಮ್ಮ ಮಧ್ಯದಲ್ಲಿರುವುದು ನಮ್ಮ ಭಾಗ್ಯವಿಶೇಷವಾಗಿದೆ.*

ಶ್ರೀ ನಿ.ಪ್ರ. ಮಹಾಂತಸ್ವಾಮಿಗಳವರು
ಚಿತ್ತರಗಿ ಸಂಸ್ಥಾನಮಠ ಇಲಕಲ್ಲ

ಬಸವಣ್ಣನವರ ಜೀವನವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಅನುಷ್ಠಾನಗೊಳಿಸುತ್ತಿದ್ದಾರೆ. ಅವರು ಸಮಾಜಕ್ಕೆ ನೀಡುತ್ತಿರುವ ಕೊಡುಗೆ ಅಪಾರವಾದುದು. ಅವರ ಜೀವನ ಬೆಳಕು ನಮಗೆ ಮಾರ್ಗದರ್ಶಕವಾಗಲಿ'' ಎಂದು ಹೇಳಿದರು.

**ಶಾ**ಸಕ ಶ್ರೀ ವಿ. ಸೋಮಣ್ಣನವರು ತಮ್ಮ ನುಡಿನಮನದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರ ಸೇವೆಯನ್ನು ಮುಕ್ತಕಂಠದಿಂದ ಶ್ಲಾಘಿಸಿದರು.

### ಸನ್ಮಾನ

**ನಾ**ಡಿನ ವಿವಿಧ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದ ಶ್ರೀ ಮತ್ತೂರು ಕೃಷ್ಣಮೂರ್ತಿ, ಶ್ರೀ ವಿಜಯ ಸಂಕೇಶ್ವರ, ಡಾ. ಕೆ.ಟಿ. ಸುರೇಂದ್ರ, ಶ್ರೀ ಡಿ.ಕೆ. ಆದಿಕೇಶವುಲು ಹಾಗೂ ಶ್ರೀ ಕಸ್ತೂರಿ ರಮೇಶ್ ಪೈ ಅವರನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಶಾಲುಹೊದಿಸಿ, ಫಲತಾಂಬೂಲ, ನೆನಪಿನ ಕಾಣಿಕೆ ಹಾಗೂ ಪ್ರಶಸ್ತಿ ಪತ್ರ ನೀಡಿ ಆಶೀರ್ವದಿಸಿದರು.

**ಸ**ನ್ಮಾನಿತರ ಪರವಾಗಿ ಮಾತನಾಡಿದ ಶ್ರೀ ಮತ್ತೂರು ಕೃಷ್ಣಮೂರ್ತಿಯವರು ತಮ್ಮ ಕೃತಜ್ಞತಾ ನುಡಿಗಳಲ್ಲಿ ಪರಮಪೂಜ್ಯರ ಸಾಧನೆ, ಸೇವೆಯನ್ನು ಭಾವುಕರಾಗಿ ಶ್ಲಾಘಿಸಿದರು. ನನಗೆ ಎಷ್ಟೋ ಪ್ರಶಸ್ತಿಗಳು ಬಂದಿವೆ. ಅವೆಲ್ಲವುಗಳಿಗಿಂತ ಪರಮಪೂಜ್ಯ ಶ್ರೀಗಳವರು ಇಂದು ನೀಡಿದ ಪ್ರಶಸ್ತಿ, ಆಶೀರ್ವಾದ ಶ್ರೇಷ್ಠಮಟ್ಟದ್ದು. ಇದು ನನ್ನ ಜೀವನದಲ್ಲೇ ಮರೆಯಲಾಗದ ಸಂದರ್ಭ. ನನಗೀಗ ಹೃದಯ ತುಂಬಿಬಂದಿದೆ. ಪರಮಪೂಜ್ಯ ಶ್ರೀಗಳವರ ಶತಮಾನೋತ್ಸವ ಸಮಾರಂಭದಲ್ಲಿ ಭಾಗಿಗಳಾಗುವ ಪುಣ್ಯ ನಮ್ಮದಾಗಲಿ ಎಂದು ಹಾರೈಸಿದರು.

**ಸ**ಮಾರಂಭದ ಅಧ್ಯಕ್ಷತೆ ವಹಿಸಿದ್ದ ಕನಕಪುರ ದೇಗುಲ ಮಠದ ಶ್ರೀ ಮ.ನಿ.ಪ್ರ.ಸ್ವ. ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳು ತಮ್ಮ ಆಶೀರ್ವಚನದಲ್ಲಿ ''ಇದೊಂದು ದಿವ್ಯ ಭವ್ಯ ಸಮಾರಂಭ. ಈ ಪುಣ್ಯ ಸಮಾರಂಭದಲ್ಲಿ ಭಾಗಿಗಳಾಗಿರುವ ನಾವೆಲ್ಲರು ಪುಣ್ಯವಂತರು. ಪೂಜ್ಯ ಶ್ರೀ ಶ್ರೀಗಳವರ ಸಾಧನೆ, ಮಾಡುತ್ತಿರುವ ಸೇವೆ ನಮಗೆ ಮಾರ್ಗದರ್ಶನವಾಗಿದೆ. ಸದಾ ವಿದ್ಯಾರ್ಥಿಗಳ ಭವಿಷ್ಯದ ಬಗ್ಗೆ ಶ್ರೀಗಳವರು ಚಿಂತನೆ ಮಾಡುತ್ತಿರುತ್ತಾರೆ. ವಿದ್ಯಾರ್ಥಿಗಳ



ರಷ್ಯನ್ ಮಹಿಳೆ ಶ್ರೀಮತಿ ಅಮ್ಮಾಸಾಯಿರಾ ಅವರು ಪರಮಪೂಜ್ಯ ಶ್ರೀ ಶ್ರೀಗಳವರಿಗೆ ವರ್ಣಚಿತ್ರ ಅರ್ಪಿಸುತ್ತಿರುವುದು.

ಸರ್ವತೋಮುಖ ಅಭಿವೃದ್ಧಿಯಲ್ಲಿ ಸಂತೋಷವನ್ನು ಕಾಣುವ ಮಹಾಪುರುಷರು' ಎಂದು ಹೇಳಿದರು.

ದಿವ್ಯ ಸಾನ್ನಿಧ್ಯವಹಿಸಿದ್ದ ಸುತ್ತೂರು ವೀರಸಿಂಹಾಸನ ಸಂಸ್ಥಾನ ಮಠದ ಅಧ್ಯಕ್ಷರಾದ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ ''ಪರಮಪೂಜ್ಯ ಶ್ರೀ ಶ್ರೀಗಳವರು ನಮಗೆಲ್ಲ ಗುರುಗಳು. ಅವರು ನಡೆದಾಡುವ ನೆಲವೇ ಪರಮಪಾವನ ಪುಣ್ಯಕ್ಷೇತ್ರ. ಸರ್ವಧರ್ಮ ಸಮನ್ವಯದ ಮಹಾಕೇಂದ್ರವಾಗಿ ಶ್ರೀ ಸಿದ್ಧಗಂಗಾ ಮಠ ಎಲ್ಲ ಮಠಗಳಿಗೂ ಆದರ್ಶವಾದುದು. ಎಂಟು ಸಾವಿರ ಜನ ಬಡ ದೀನದಲಿತ ವಿದ್ಯಾರ್ಥಿಗಳಿಗೆ ಅನ್ನದಾನ, ವಿದ್ಯಾದಾನ ಮಾಡುತ್ತಿರುವುದು ಸಾಮಾನ್ಯವಾದುದಲ್ಲ. ಇವತ್ತು ಲಕ್ಷಾಂತರ ಮನೆಗಳಲ್ಲಿ ಸಿದ್ಧಗಂಗಾ ಜ್ಯೋತಿ ಬೆಳಗಿಸುತ್ತಿದೆ'' ಎಂದು ನುಡಿದರು.

> ಅರ್ಚನ, ಕಾಯಕ, ದಾಸೋಹವನ್ನು ನಿರಂತರ ನಡೆಸಿಕೊಂಡು ಬರುತ್ತಿರುವ ಸದಾ ಚೈತನ್ಯದ ಚಿಲುಮೆಯಂತಿರುವ ಶಿವಕಳೆಯಿಂದ ಬೆಳಗುತ್ತಿರುವ ಮಹಾಸ್ವಾಮಿಗಳವರು ಲೋಕ ಪೂಜ್ಯರಾಗಿದ್ದಾರೆ.
>
> ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ, ಮಹಾಸ್ವಾಮಿಗಳು
> ಶ್ರೀ ಮುರುಘರಾಜೇಂದ್ರ, ಮಹಾಸಂಸ್ಥಾನ ಮಠ
> ಆನಂದಪುರಂ.

ತ್ರಿವಿಧ ದಾಸೋಹಮೂರ್ತಿ, ಕಾಯಕ ಯೋಗಿ ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ ಇಂದು ಎಲ್ಲೆಡೆ ಶಾಂತಿ ಕದಡುತ್ತಿದೆ. ಅಶಾಂತಿ ಅಗ್ನಿಕುಂಡವಾಗಿದೆ. ಕೋಟ್ಯಾಂತರ ಜನರಿಗೆ ಸಾಧಾರಣ ಜೀವನದ ಸೌಕರ್ಯಗಳು ಇಲ್ಲದೆ ತೊಂದರೆಯಾಗುತ್ತಿದೆ. ಆದರೆ ಬಹಳಷ್ಟು ಸ್ವಾರ್ಥಿಗಳು ಭಯಾನಕರವಾದ ಮಾರಾಕಾಸ್ತ್ರಗಳನ್ನು ಸಂಗ್ರಹಿಸಿಡಲು ಮತ್ತು ಅವುಗಳನ್ನು ಉತ್ಪಾದಿಸಲು ಸಂಪತ್ತನ್ನು ವಿನಿಯೋಗಿಸುತ್ತಿದ್ದಾರೆ. ಇದು ಯಾವ ಪುರುಷಾರ್ಥಕ್ಕೆ, ಇದು ಯಾವ ನಾಗರೀಕತೆ? ಎಂದು ಪ್ರಶ್ನಿಸಿದರು. ''ವಿಜ್ಞಾನಯುಗ, ಮತ್ತು ಜ್ಞಾನಯುಗ ವಿಜ್ಞಾನ ಬೆಳವಣಿಗೆಗಳಿಗೆ ಬಹಳ ತೀಕ್ಷ್ಣವಾಗಿದೆ. ಇದರಿಂದ ಮಾನವನಿಗೆ ಮಹಾನ್ ಶಕ್ತಿದೊರೆತಂತಾಗಿ ತಾನು ಸರ್ವಸಮರ್ಥ ಎಲ್ಲವನ್ನು ಸಾಧಿಸಬಲ್ಲೆ ಎಂದು ಮನುಷ್ಯರು ತಿಳಿದುಕೊಂಡಿದ್ದಾರೆ. ಇದರಿಂದಾಗಿ ಜೀವನ ಮೌಲ್ಯಗಳು ಕುಸಿದುಬೀಳುತ್ತಿದೆ. ನೈತಿಕಥೆ ಪಥವಾಗುತ್ತಿದೆ'' ಎಂದು ತಿಳಿಸಿದರು.

ಪೂಜ್ಯ ಶ್ರೀಗಳವರು ತಮ್ಮ ಆಶೀರ್ವಚನದಲ್ಲಿ ''ಧರ್ಮದ ಬುನಾದಿಯ ಮೇಲೆ ನವ ಸಮಾಜ ಮತ್ತು ನವ ರಾಷ್ಟ್ರದ ನಿರ್ಮಾಣದ ಬಗ್ಗೆ ಧರ್ಮಪೀಠಗಳು ಚಿಂತನೆ ಮಾಡಬೇಕೆನ್ನುವ ಮಾತು ಇಂದು ಹೆಚ್ಚು ಮಹತ್ವ ಪಡೆಯುತ್ತಿದೆ. ಮಾನವ ಪ್ರೇಮಿಗಳೆಲ್ಲರೂ ಜಗತ್ತಿನ ಒಳಿತಿಗೆ ದುಡಿಯಬೇಕು'' ಎಂದರು.

''ಯೋಗ್ಯವಾದ ವಿದ್ಯೆಯನ್ನು ಪಡೆದ ನವಪೀಳಿಗೆ ವಿವೇಕ ಮತ್ತು ದೂರದೃಷ್ಟಿಯುಳ್ಳವರಾಗಿ ರಾಷ್ಟ್ರಕಟ್ಟುವ ನಿಟ್ಟಿನಲ್ಲಿ ಮಹತ್ವದ ಪಾತ್ರ ವಹಿಸಬೇಕು. ಆದ್ದರಿಂದ ಧರ್ಮಪೀಠಗಳು ಈ ಬಗ್ಗೆ ಹೆಚ್ಚಿನ ಗಮನ ಹರಿಸಬೇಕು'' ಎಂದು ಕರೆ ನೀಡಿದರು.





*(ಪೂಜ್ಯ ಶ್ರೀಗಳವರ ಆಶೀರ್ವಚನದ ಪೂರ್ಣ ಪಾಠವನ್ನು ಮುಂದಿನ ಸಂಚಿಕೆಯಲ್ಲಿ ಕೊಡಲಾಗುತ್ತದೆ).*

ವೇದಿಕೆಯ ಮೇಲೆ ಶಾಸಕರಾದ ಶ್ರೀ ಬಿ.ಎಸ್. ಯಡಿಯೂರಪ್ಪ, ಶ್ರೀ ಸಿ. ಭೈರೇಗೌಡ, ಶ್ರೀ ಎಸ್.ಸಿ. ಮುದ್ದಹನುಮೇಗೌಡ, ಶ್ರೀ ಮಹದೇವ ಪ್ರಸಾದ್, ಶ್ರೀ ಎಸ್. ಶಿವಣ್ಣ, ಶ್ರೀ ಸಿ. ಚನ್ನಿಗಪ್ಪ, ಶ್ರೀ ಎಂ.ಡಿ. ಲಕ್ಷ್ಮೀನಾರಾಯಣ, ಶ್ರೀ ಎಸ್. ಚನ್ನಬಸವಯ್ಯ, ಸಂಸದ ಶ್ರೀ ಜಿ.ಎಸ್. ಬಸವರಾಜು, ಸಚಿವ ಶ್ರೀ ಎಚ್.ಎಂ. ರೇವಣ್ಣ, ವಿರೋಧಪಕ್ಷದ ನಾಯಕ ಶ್ರೀ ಜಗದೀಶ ಶೆಟ್ಟರ್, ಮಾಜಿ ಸಂಸದ ಶ್ರೀ ಸಿ. ನಾರಾಯಣಸ್ವಾಮಿ, ಎ.ಪಿ.ಎಂ.ಪಿ. ಅಧ್ಯಕ್ಷ ಶ್ರೀ ಪಂಚಾಕ್ಷರಯ್ಯ, ನಗರಸಭಾಧ್ಯಕ್ಷ ಶ್ರೀ ಟಿ.ಪಿ. ಮಂಜುನಾಥ್, ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಶ್ರೀ ಸಿದ್ಧಲಿಂಗೇಗೌಡ ಮೊದಲಾದ ಗಣ್ಯರು ಉಪಸ್ಥಿತರಿದ್ದರು. ಪ್ರೊ. ಹೆಚ್.ವಿ. ವೀರಭದ್ರಯ್ಯ ಅವರು ಕಾರ್ಯಕ್ರಮವನ್ನು ನಿರೂಪಿಸಿದರು. ಶರಣು ಸಮರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

### ಶುಭ ಸಂದೇಶ

ಶ್ರೀ ಸಿದ್ಧಗಂಗಾ ಮಠದ ಪೀಠಾಧ್ಯಕ್ಷ ರಾದ ತ್ರಿವಿಧ ದಾಸೋಹಿಗಳೂ ಆದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ತೊಂಬತ್ತಾರು ಸಂವತ್ಸರಗಳು ಸಂದ ಶುಭ ಸಂದರ್ಭದಲ್ಲಿ ಭಕ್ತವೃಂದ ಗುರುವಂದನಾ ಮಹೋತ್ಸವವನ್ನು ಆಚರಿಸುತ್ತಿರುವ ವಿಷಯ ತಿಳಿದು ನಮಗೆ ಬಹಳ ಸಂತೋಷವಾಯಿತು. 'ದಯೆಯೇ ಧರ್ಮದ ಮೂಲವಯ್ಯಾ' ಎಂಬ ಶರಣರ ವಾಣಿಯಂತೆ ಪೂಜ್ಯರು ನಾಡಿನ ಧಾರ್ಮಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಅಭಿವೃದ್ಧಿಗೆ ಹಾಗೂ ಸಮಾಜದ ಸರ್ವತೋಮುಖ ಉದ್ಧಾರಕ್ಕೆ ಕಂಕಣಬದ್ಧರಾಗಿ ನಿರಂತರವಾಗಿ ದುಡಿಯುತ್ತಿದ್ದಾರೆ. 'ವಿದ್ಯಾದಾನಂ ಸರ್ವಧನ ಪ್ರಧಾನಂ' ಎಂಬ ಉಕ್ತಿಯನ್ನು ಗಮನದಲ್ಲಿಟ್ಟುಕೊಂಡು ಪ್ರಾಥಮಿಕ ಶಾಲೆಯಿಂದ ಪ್ರಾರಂಭಿಸಿ ತಾಂತ್ರಿಕ ಕಾಲೇಜುಗಳವರೆಗೆ ಶಿಕ್ಷಣ ಸಂಸ್ಥೆಗಳನ್ನು, ಅನೇಕ ಉಚಿತ ಪ್ರಸಾದ ನಿಲಯಗಳನ್ನು ತೆರೆದು ಎಲ್ಲಾ ವರ್ಗದ ಜನಗಳಿಗೂ ಜ್ಞಾನದಾಸೋಹ ಹಾಗೂ ಅನ್ನದಾಸೋಹ ಮಣಿಹವನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಜನತೆಯನ್ನು ಧಾರ್ಮಿಕ ಪಾರಮಾರ್ಥಿಕ ಮಾರ್ಗಗಳಲ್ಲಿ ಮುನ್ನಡೆಯುವಂತೆ ಮಾಡುವ ನಿಟ್ಟನಲ್ಲಿ ಶ್ರೀಗಳವರ ಸೇವೆ ಪ್ರಶಂಸನೀಯ.

ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು
ಪೀಠಾಧ್ಯಕ್ಷರು
ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠ

### ಶುಭ ಸಂದೇಶ

ತ್ರಿಕಾಲ ಪೂಜಾನಿಷ್ಠರೂ, ಕಾಯಕ ಯೋಗಿಗಳೂ ಆದ ತಾವು ಸಮಾಜದ ಸರ್ವರ ಸರ್ವಾಂಗೀಣ ಅಭಿವೃದ್ಧಿಗೆ ಅಹರ್ನಿಶಿ ದುಡಿಯುತ್ತಿರುವ ತಮ್ಮ ಘನ ವ್ಯಕ್ತಿತ್ವವು ಸಮಾಜ ಸೇವೆಯಲ್ಲಿ ತೊಡಗಿರುವ ಪ್ರತಿಯೊಬ್ಬರಿಗೂ ಆದರ್ಶಪ್ರಾಯ ಮತ್ತು ಅನುಕರಣೀಯವಾಗಿದೆ. ಭಕ್ತಿ-ಜ್ಞಾನ-ಕ್ರಿಯೆಗಳ ತ್ರಿವೇಣಿ ಸಂಗಮವಾಗಿರುವ, ಸಮರಸ ವ್ಯಕ್ತಿತ್ವದ ತಮ್ಮ ಕರ್ತೃತ್ವ ಶಕ್ತಿಯು ನಾಡು-ನುಡಿಯ ಬೆಳವಣಿಗೆಗೆ ಆಧಾರ ಭೂತವಾಗಿದೆ. ಸಮಾಜದ ಸರ್ವರಲ್ಲಿ ಲಿಂಗಯ್ಯ ನನ್ನು ಕಾಣುವ ತಮ್ಮ ಪರುಷಮಯ ದೃಷ್ಟಿ; ಸರ್ವರಿಗೆ ಲೇಸನ್ನುಂಟು ಮಾಡುವ ಪರುಷಮಯ ಹಸ್ತವು ಸರ್ವರಿಗೂ ಇನ್ನಷ್ಟು ದೀರ್ಘಕಾಲ ಲಭಿಸಿದರೆ ಸಮಾಜ ಮತ್ತಷ್ಟು ವಿಕಾಸದೆಡೆಗೆ ಸಾಗಲು ಸಹಾಯವಾಗುತ್ತದೆ. ತಮ್ಮ ಕಾಯ ವಜ್ರಕಾಯವಾಗಿ, ಮಾತು ಮಂತ್ರವಾಗಿ, ನಾಡು-ನುಡಿಯನ್ನು ರಕ್ಷಿಸುವ ರಕ್ಷಾ ಕವಚವಾಗಲಿ, ಸಮಾಜೋಪಯೋಗಿ ಪ್ರಸಿದ್ಧ ಕಾರ್ಯ ಗಳಿಂದ ಸಿದ್ಧಪುರುಷರಾಗಿರುವ ತಮ್ಮ ಕೃಪಾಶೀರ್ವಾದವು ಸರ್ವಜನಮನಕ್ಕೆ ಲಭಿಸು ವಂತಾಗಲಿ. ಅಜ್ಞಾನವ ಅಳಿದು, ಸುಜ್ಞಾನವ ಬೆಳೆಸಿ, ಕರ್ಮಭೂಮಿಯನ್ನು ಧರ್ಮ ಭೂಮಿಯನ್ನಾಗಿಸಿದ ಮಹಾಮಹಿಮರಿಗೆ ಅನಂತಾನಂತ ನಮನಗಳು.

ಶ್ರೀ ಮಲ್ಲಿಕಾರ್ಜುನ ಶಿವಾಚಾರ್ಯ ಮಹಾಸ್ವಾಮಿಗಳವರು
ಶ್ರೀ ತರಳಬಾಳು ಜಗದ್ಗುರು ಬೃಹನ್ಮಠ ಸಿರಿಗೆರೆ.

*ಸಾಹಿತ್ಯ ಸಮ್ಮೇಳನ*

ಸಂಜೆ ೫ ಗಂಟೆಗೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರು ಸಾಹಿತ್ಯ ಸಮ್ಮೇಳನವನ್ನು ಉದ್ಘಾಟಿಸಿದರು. ಬೆಂಗಳೂರಿನಲ್ಲಿ ಭಾರತೀಯ ವಿದ್ಯಾಭವನದ ಕಾರ್ಯನಿರ್ವಾಹಕ ನಿರ್ದೇಶಕರಾದ ಶ್ರೀ ಮತ್ತೂರು ಕೃಷ್ಣಮೂರ್ತಿ ಅವರು ಅಧ್ಯಕ್ಷತೆ ವಹಿಸಿದ್ದರು. ಹಿರಿಯ ವಿದ್ವಾಂಸರಾದ ಡಾ. ಎಸ್.ಎಂ. ವೃಷಭೇಂದ್ರಸ್ವಾಮಿ ಮತ್ತು ಡಾ. ಬಿ.ವಿ. ಶಿರೂರ ಅವರು ಉಪನ್ಯಾಸ ನೀಡಿದರು.

ರಾತ್ರಿ ಮೂಡುಬಿದ್ರೆಯ ಯಕ್ಷಗಾನ ಕಲಾಮಂಡಳಿಯವರಿಂದ 'ಶಿವಪಂಚಾಕ್ಷರಿ ಮಹಿಮೆ' ಸಾಂಸ್ಕೃತಿಕ ಕಾರ್ಯಕ್ರಮ ನಡೆಯಿತು.

## ಸಾರಸ್ವತಲೋಕದ ಸ್ವಾತಿಮುತ್ತು
## ಶ್ರೀ ಮತ್ತೂರು ಕೃಷ್ಣಮೂರ್ತಿ



*ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ, ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜನ್ಮದಿನವನ್ನು 'ಗುರುವಂದನ' ಸಮಾರಂಭವಾಗಿ ಸಡಗರ ಸಂಭ್ರಮ ಹಾಗೂ ಅರ್ಥಪೂರ್ಣವಾಗಿ ಆಚರಿಸುವ ದೃಷ್ಟಿಯಿಂದ ಪ್ರತಿವರ್ಷ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದ ಗಣ್ಯರನ್ನು ಗೌರವಿಸುವ ಸತ್‌ಸಂಪ್ರದಾಯವನ್ನು ಹಮ್ಮಿಕೊಂಡು ನಡೆಸಿಕೊಂಡು ಬರಲಾಗುತ್ತಿದೆ. ಅದರಂತೆ ೯೬ನೇ ಗುರುವಂದನ ಸಮಾರಂಭದಲ್ಲಿ ಶ್ರೀ ಮತ್ತೂರು ಕೃಷ್ಣಮೂರ್ತಿ, ಶ್ರೀ ವಿಜಯ ಸಂಕೇಶ್ವರ, ಡಾ. ಕೆ.ಟಿ. ಸುರೇಂದ್ರ, ಶ್ರೀ ಡಿ.ಕೆ. ಆದಿಕೇಶವುಲು ಹಾಗೂ ಶ್ರೀ ಕಸ್ತೂರಿ ರಮೇಶ್ ಪೈ ಅವರಿಗೆ ಪರಮಪೂಜ್ಯ ಶ್ರೀ ಶ್ರೀಗಳವರು ಶಾಲುಹೊದಿಸಿ ಫಲತಾಂಬೂಲ, ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು. ಸಾಹಿತ್ಯ ಕ್ಷೇತ್ರದಲ್ಲಿ ಅನುಪಮ ಸೇವೆ ಸಲ್ಲಿಸಿದ ಶ್ರೀ ಮತ್ತೂರು ಕೃಷ್ಣಮೂರ್ತಿಯವರ ಪರಿಚಯವನ್ನು ಪ್ರಸ್ತುತ ಸಂಚಿಕೆಯಲ್ಲಿ ಪರಿಚಯ ಮಾಡಿಕೊಡಲಾಗಿದೆ.*

ಸರ್ವಜನಾಂಗದ ಸುಂದರ ತೋಟವಾದ ಶಿವಮೊಗ್ಗ ಜಿಲ್ಲೆ ನಿತ್ಯ ಹರಿದ್ವರ್ಣದ ನಿಸರ್ಗರಮಣೀಯತೆಗೆ ಪ್ರಸಿದ್ಧವಾಗಿರುವಂತೆಯೇ ಪ್ರಬುದ್ಧ ಕವಿ ಕೋಗಿಲೆಗಳಿಗೆ ಸಾಹಿತ್ಯ ಶಿಲ್ಪಿಗಳಿಗೆ, ಪತ್ರಕರ್ತರಿಗೆ, ಸಮಾಜಸುಧಾರಕರಿಗೆ, ಕ್ರಾಂತಿಕಾರರಿಗೆ, ಸಂಶೋಧಕರಿಗೆ, ವಿದ್ವದ್ ರತ್ನಗಳಿಗೆ ತೌರುಭೂಮಿಯೆನಿಸಿರುವುದು ಸರ್ವವೇದ್ಯ. ರಾಷ್ಟ್ರಕವಿ ಕುವೆಂಪು, ಡಾ. ಜಿ.ಎಸ್. ಶಿವರುದ್ರಪ್ಪ, ಡಾ. ಎಚ್. ತಿಪ್ಪೇರುದ್ರಸ್ವಾಮಿ, ಡಾ. ಯು.ಆರ್. ಅನಂತಮೂರ್ತಿ, ಡಾ. ಎಂ. ಚಿದಾನಂದಮೂರ್ತಿ, ಪೂರ್ಣಚಂದ್ರ ತೇಜಸ್ವಿ, ಪಿ. ಲಂಕೇಶ್, ಶಾಂತವೇರಿ ಗೋಪಾಲಗೌಡ, ಕೆ.ವಿ. ಸುಬ್ಬಣ್ಣ ಹೀಗೆ ಈ ಪ್ರತಿಷ್ಠಿತರ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಈ ಪಂಕ್ತಿಯಲ್ಲಿ ಸದ್ದಿಲ್ಲದೆ ಅರಳಿದ ಸಾತ್ವಿಕ ಸುಂದರ ಚೇತನ ಶ್ರೀ ಮತ್ತೂರು ಕೃಷ್ಣಮೂರ್ತಿಯವರು.

ಶಿವಮೊಗ್ಗ ಜಿಲ್ಲೆಯ ಮತ್ತೂರು ಪುಣ್ಯಗ್ರಾಮದಲ್ಲಿ ೧೯೨೯ರಲ್ಲಿ ಜನಿಸಿದ ಶ್ರೀ ಕೃಷ್ಣಮೂರ್ತಿಯವರು ಬಾಲ್ಯದಲ್ಲಿ ಸಂಸ್ಕೃತ, ವೇದ, ವ್ಯವಸಾಯಗಳನ್ನು ಕಲಿತರು. ಜೀವನದರ್ಶನ ಮಾಡಿಸುವ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತ, ಭಾಗವತಗಳ ಪರಿಚಯದಿಂದ ವಿಕಾಸಗೊಂಡರು. ಕಾಲಚಕ್ರದ ಗತಿಯಲ್ಲಿ ಹೆಜ್ಜೆ ಹಾಕಿದ ಶ್ರೀಯುತರು ಕರ್ನಾಟಕದ ನೆರೆ ರಾಜ್ಯ ತಮಿಳುನಾಡಿನ ರಾಜಧಾನಿಯಾದ ಮದ್ರಾಸ್‌ನ ಕ್ರಿಶ್ಚಿಯನ್ ಕಾಲೇಜಿನ ಹೈಸ್ಕೂಲಿನಲ್ಲಿ ಮೆಟ್ರಿಕ್‌ಪಾಸು ಮಾಡಿದರು. ಸ್ವಾತಂತ್ರ್ಯ ಸಂಗ್ರಾಮ ಕೈಬೀಸಿ ಕರೆಯಿತು. ಮಹಾತ್ಮ ಗಾಂಧೀಜಿಯವರ ಸ್ವಾತಂತ್ರ್ಯ ಚಳುವಳಿಯಿಂದ ಆಕರ್ಷಿತರಾದ ಶ್ರೀ ಕೃಷ್ಣಮೂರ್ತಿಯವರು ಆ ಮಹತ್ವದ ಸಮರದಲ್ಲಿ ಭಾಗಿಗಳಾದರು. ಅದೇ ಸಂದರ್ಭದಲ್ಲಿ ತಮಿಳು, ಹಿಂದಿಯನ್ನು ಕಲಿತರು. ಆ ಮೂಲಕ ರಾಷ್ಟ್ರಧುರೀಣರ ಜೀವನಚರಿತ್ರೆಗಳನ್ನು ಓದಿದರು. ಭಾಷಣ ಕಲೆಯನ್ನು ಕರಗತಮಾಡಿಕೊಂಡರು. ಉತ್ತಮ ಅಭಿರುಚಿಯ ಅಭಿವೃದ್ಧಿ ಪಥಗಾಮಿಗಳಾಗಿ ಕನ್ನಡದ ಪ್ರಮುಖರೆನಿಸಿದ ಡಿ.ವಿ.ಜಿ., ಮಾಸ್ತಿ, ವಿ.ಸೀ., ಶಿವರಾಮ ಕಾರಂತ, ಸಿದ್ದವ್ವನಹಳ್ಳಿ ಕೃಷ್ಣಶರ್ಮ ಮತ್ತಿತರರ ಶ್ರೇಷ್ಠ ಓದಿನಿಂದ ಸಾಹಿತ್ಯ ಜಗತ್ತಿನ ಯಾತ್ರೆ ಕೈಗೊಂಡರು. ಸಾಹಿತ್ಯ-ಗಮಕಗಳು ಒಂದೇ ನಾಣ್ಯದ ಎರಡು ಮುಖಗಳೆಂಬುದನ್ನು ಅರಿತ ಶ್ರೀಯುತರು ಮತ್ತೂರಿನ ಶ್ರೀ ರಾಮಾಶಾಸ್ತ್ರಿಗಳು ಮತ್ತು ಶ್ರೀ ಲಕ್ಷ್ಮೀ ಕೇಶವ ಶಾಸ್ತ್ರಿಗಳವರ ಗಮಕ ವಾಚನದಿಂದ ಪ್ರಭಾವಿತ ರಾಗಿ ಗಮಕ ಕಲೆಯನ್ನು ಮೈಗೂಡಿಸಿಕೊಂಡರು.

೧೯೫೦ರಲ್ಲಿ ವೃತ್ತಿ ಜೀವನವನ್ನಾರಂಭಿಸಿದ ಶ್ರೀ ಮೂರ್ತಿಯವರು ಬೆಂಗಳೂರಿನ ಸಾರಿಗೆ ಸಂಸ್ಥೆ,





ಮಿನರ್ವಮಿಲ್, ರಾಜಾಮಿಲ್‌ಗಳಲ್ಲಿ ಕೆಲಸ ಮಾಡಿದರು. ಸಂಯುಕ್ತ ಕರ್ನಾಟಕ ದಿನ ಪತ್ರಿಕೆಯಲ್ಲಿ ವರದಿಗಾರರಾಗಿ ಪತ್ರಿಕಾ ಕೃಷಿಕೃತ್ಯ ಕಾಯಕದಲ್ಲಿ ತೊಡಗಿ, ಶ್ರೀ ಶಾಮರಾವ್ ರವರ ಮಾರ್ಗದರ್ಶನದಲ್ಲಿ ತರಬೇತಿ ಹೊಂದಿ ಉಪ ಸಂಪಾದಕರಾಗಿ ಬಡ್ತಿ ಪಡೆದು, ಅನಂತರ ಗಾಂಧೀ ಸಾಹಿತ್ಯ ಸಂಘದಲ್ಲಿ ಸೇವೆ ಮಾಡುತ್ತ, ಆಕಾಶವಾಣಿಯಲ್ಲಿ ಮಕ್ಕಳ ನಾಟಕ ವಿಭಾಗದಲ್ಲಿ ನೈಪುಣ್ಯತೆ ಪಡೆದರು. ೧೯೬೯ರಲ್ಲಿ ಬೆಂಗಳೂರಿನ ಭಾರತೀಯ ವಿದ್ಯಾಭವನದ ನಿಬಂಧಕರಾಗಿ ಸೇವೆಗೈದು ೧೯೭೨ರಲ್ಲಿ ಲಂಡನ್ ಭವನದ ನಿಬಂಧಕರಾಗಿ ವರ್ಗಾವಣೆ ಪಡೆದು ಆ ಕೇಂದ್ರದ ಕಾರ್ಯನಿರ್ವಾಹಕ ನಿರ್ದೇಶಕರಾಗಿ ಪದೋನ್ನತಿ ಹೊಂದಿ ೨೩ ವರ್ಷಗಳು ಸೇವೆಸಲ್ಲಿಸಿ ೧೯೯೫ರಲ್ಲಿ ನಿವೃತ್ತಿ ಹೊಂದಿದರು. ವೃತ್ತಿ ಜೀವನದ ತೃಪ್ತಿಯಿಂದ ನೆಮ್ಮದಿಯನ್ನು ತಮ್ಮದಾಗಿಸಿಕೊಂಡರು.

ಶ್ರೀಯುತ ಮತ್ತೂರರು ಉತ್ತಮ ಭಾಷಣಕಾರರು. ಅವರ ಭಾಷಣಗಳು ತುಂಬುನದಿಯಂತೆ ಕೇಳುಗರ ಮನಸ್ಸನ್ನು ಮಡಿಮಾಡುತ್ತ ಸಾಗುವ ವಾಗ್‌ಝರಿಗಳು. ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ನೂರಾರು ಭಾಷಣಗಳನ್ನು ಬಿ.ಬಿ.ಸಿ.ಯಲ್ಲಿ ಪ್ರಸಾರಮಾಡಿರುವ ಹಿರಿಮೆ ಶ್ರೀಯುತರದು. ಭಾರತೀಯ ಹಬ್ಬಗಳನ್ನು ಕುರಿತು ಬ್ರಿಟನ್ನಿನ ಥೇಮ್ಸ್ ಟೆಲಿವಿಷನ್‌ಗಳಲ್ಲಿ ಉಪನ್ಯಾಸ ನೀಡಿದ್ದಾರೆ. ಹಿಂದೂ ಧರ್ಮ, ಸಂಸ್ಕೃತಿ, ಕಲೆಗಳ ಬಗ್ಗೆ ಬ್ರಿಟನ್ನಿನ ಮತ್ತು ಭಾರತದ ಹಲವಾರು ಸಂಘ, ಸಂಸ್ಥೆಗಳು, ಶಾಲಾ ಕಾಲೇಜುಗಳಲ್ಲಿ ಉಪನ್ಯಾಸ ಮಾಡಿದ್ದಾರೆ. ಶ್ರೀ ಮೂರ್ತಿಯವರು ಬ್ರಿಟಿಷ್ ಬ್ರಾಡ್‌ಕಾಸ್ಟಿಂಗ್ (ಬಿ.ಬಿ.ಸಿ.) ಸಂಸ್ಥೆಯ ವಜ್ರಮಹೋತ್ಸವದ ಸಂದರ್ಭದಲ್ಲಿ ಸಲ್ಲಿಸಿದ ಹಿಂದೂ ಧರ್ಮದ ಪ್ರಾರ್ಥನೆಯನ್ನು ಕೇಳಿದ ಬ್ರಿಟಿಷ್ ರಾಣಿಯವರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದು ಶ್ರೀಯುತರ ವ್ಯಕ್ತಿತ್ವಕ್ಕೆ ಲೇಪಿಸಿದ ಚಿನ್ನದ ಲೇಪನವಾಗಿದೆ.

ಶ್ರೀ ಕೃಷ್ಣಮೂರ್ತಿಯವರು ಬಹುಭಾಷಾ ವಿದ್ವಾಂಸರು. ಶ್ರೀಯುತರು ತಮಿಳಿನ ಪ್ರಸಿದ್ಧ ಕಾದಂಬರಿಕಾರರಾದ ಕಲಿ, ಅಖಿಲನ್, ಅನುತ್ತಮಾ, ಕೌಸಲ್ಯಾ ನಾರಾಯಣನ್, ಕಿ.ವಾ. ಜಗನ್ನಾಥನ್, ಮುಂತಾದವರ ಕೃತಿಗಳಾದ ಅಲೆಯೊಸಗೆ, ದೀಪಧಾರಿಣಿ, ಡಾ. ಅಖಿಲಾ ಇತ್ಯಾದಿಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಉಪಕಾರ ಮಾಡಿದ್ದಾರೆ.

ಹಿಮಾಲಯದ ವೀರರು, ಕರ್ನಾಟಕದ ಸಂಗೀತ ವಿದ್ವನ್ಮಣಿಗಳು, ಡಾ. ಜಾಕೀರ್ ಹುಸೇನ್, ಜವಹರಲಾಲ್ ನೆಹರು, ರಾಜೇಂದ್ರ ಪ್ರಸಾದ್, ಆಚಾರ್ಯ ವಿನೋಬಭಾವೆ ಇವರುಗಳ ಜೀವನ ಚರಿತ್ರೆ, ಉಪದೇಶಗಳನ್ನು ಕನ್ನಡಿಸಿದ್ದಾರೆ. ಆ ಮೂಲಕ ತಮ್ಮ ಸದಭಿರುಚಿ, ಸಂಸ್ಕಾರಗಳನ್ನು ಬಿತ್ತರಿಸಿದ್ದಾರೆ. ತಮ್ಮ ಅಣ್ಣಂದಿರಾದ ಸಂಗೀತ ವಿದ್ವಾನ್ ಶಂಕರಮೂರ್ತಿಯವರ ನೇತೃತ್ವದಲ್ಲಿ ೫೦ಕ್ಕೂ ಹೆಚ್ಚು ಸಂಗೀತ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಜೊತೆಗೆ ಇಂಗ್ಲೀಷ್‌ನಲ್ಲಿ ಪೂಜಾವಿಧಿ, ಸಂಧ್ಯಾವಂದನೆ, ಶಾಂತಿಮಂತ್ರಗಳು, ಇಂದ್ರಾಕ್ಷೀ ಸ್ತೋತ್ರಗಳನ್ನು ರಚಿಸಿರುವ ಧಾರ್ಮಿಕ ಬಂಧುಗಳಾಗಿದ್ದಾರೆ. ಲಾಲ್‌ಬಹಾದ್ದೂರ್‌ಶಾಸ್ತ್ರಿ, ಕಾಮರಾಜ್ ನಾಡಾರ್, ವಿನೋಬಭಾವೆ, ಸಾದಿಕ್ ಅಲಿ ಮೊದಲಾದವರ ಆಶುಭಾಷಣಗಳನ್ನು ಆಗಿಂದಾಗಲೇ ಕನ್ನಡಕ್ಕೆ ಅನುವಾದಿಸಿ ಜನಾದರಣೀಯರಾಗಿರುವ ಶ್ರೀ ಮತ್ತೂರರ ಪ್ರತಿಭಾ ಶ್ರೀಮಂತಿಕೆ ಸ್ಮರಣೀಯವಾದುದು. ಸದ್ಯದಲ್ಲಿ ಬೆಂಗಳೂರಿನ ಭಾರತೀಯ ವಿದ್ಯಾಭವನ ಕೇಂದ್ರದ ಕಾರ್ಯನಿರ್ವಾಹಕ ನಿರ್ದೇಶಕರಾಗಿ ೧೯೯೫ರಿಂದ ಸೇವೆ ಸಲ್ಲಿಸುತ್ತಿರುವ ಶ್ರೀ ಕೃಷ್ಣಮೂರ್ತಿಯವರು ಹಲವಾರು ಸಂಘ, ಸಂಸ್ಥೆ, ಮಠಗಳಿಂದ ಪುರಸ್ಕೃತರಾಗಿದ್ದಾರೆ. ಗಾಂಧಿ ಶತಾಬ್ದಿ ವರುಷದ ಚಿನ್ನದ ಪದಕ, ತಮಿಳು ಸಾಹಿತ್ಯ ಸಮ್ಮೇಳನದ ಚಿನ್ನದ ಪದಕ, ಕರ್ನಾಟಕ ರಾಜ್ಯ ಪ್ರಶಸ್ತಿ, ಭಾರತಸೇವಾ ಪ್ರಶಸ್ತಿ, ಧರ್ಮಸ್ಥಳದ ಸರ್ವಧರ್ಮ ಸಮ್ಮೇಳನ ಪ್ರಶಸ್ತಿ, ಶ್ರೀ ಕಂಚಿ ಕಾಮಕೋಟಿ ಪೀಠಾಧಿಪತಿಗಳಿಂದ 'ವ್ಯಾಖ್ಯಾನಕೋಕಿಲ' ಪ್ರಶಸ್ತಿ, ಕುಮಾರವ್ಯಾಸ ಭಾರತ ವ್ಯಾಖ್ಯಾನಕ್ಕಾಗಿ ಸ್ವರ್ಣಪದಕ, ಅತ್ತಿಮಬ್ಬೆ ಪ್ರತಿಷ್ಠಾನ ನೀಡಿರುವ 'ವ್ಯಾಖ್ಯಾನ ಭಾಸ್ಕರ' ಬಿರುದು, ಬೆಂಗಳೂರು ಗಾಯನ ಸಮಾಜ ನೀಡಿದ ಕಲಾವಿದ – ೧೯೯೯ರ ಪ್ರಶಸ್ತಿ, ಗೊರೂರು ಪ್ರತಿಷ್ಠಾನ ನೀಡಿದ – ೨೦೦೧ರ ಪ್ರಶಸ್ತಿ ಮುಂತಾಗಿ ಹತ್ತು ಹಲವು ಪ್ರಶಸ್ತಿಗಳಿಂದ, ಬಿರುದುಗಳಿಂದ, ಅಲಂಕೃತರಾಗಿರುವ ಶ್ರೀ ಮತ್ತೂರರು ಸರಳ ಸಾತ್ವಿಕತೆಯೇ ಮೈದಳೆದಂತಿರುವ ವಿನಮ್ರರು, ವಿನೀತ ಸೌಶೀಲ್ಯ ಸಂಪನ್ನರು.

ಶ್ರೀಯುತರು ೧೯೯೫ರಿಂದ ಬೆಂಗಳೂರು ಭಾರತೀಯ ವಿದ್ಯಾಭವನ ಕೇಂದ್ರದ ಕಾರ್ಯನಿರ್ವಾಹಕರಾಗಿ ಕೈಗೊಂಡಿರುವ ಸಾಹಿತ್ಯ ಸೇವಾ ಪ್ರಕಟಣೆಗಳು ವಿಶಿಷ್ಟವಾದವು. ಮಹಾತ್ಮಗಾಂಧಿ ಕೃತಿ ಸಂಚಯದ ಒಂದು ನೂರು ಪುಸ್ತಕಗಳನ್ನು ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದಮಾಡಿ ಪ್ರಕಟಿಸುವ ಮಣಿಹದಲ್ಲಿ ಈಗಾಗಲೇ ನಾಲ್ಕು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಅಂತೆಯೇ ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿಯ

ಹನ್ನೊಂದು ಸಂಪುಟಗಳನ್ನು ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದಿಸುವ ಕೆಲಸದಲ್ಲಿದ್ದು ಈಗಾಗಲೇ ಮೂರು ಸಂಪುಟಗಳನ್ನು ಏಳು ಭಾಗಗಳಾಗಿ ಪ್ರಕಟಿಸಿದ್ದಾರೆ. ಗಮಕವಿದ್ವಾನ್ ಹೊಸಹಳ್ಳಿ ಕೇಶವಮೂರ್ತಿ ಹಾಗೂ ವ್ಯಾಖ್ಯಾನ ಕೋಕಿಲ ಮತ್ತೂರು ಕೃಷ್ಣಮೂರ್ತಿಯವರ ವಾಚನ ಮತ್ತು ವ್ಯಾಖ್ಯಾನಗಳೊಂದಿಗೆ ಕುಮಾರವ್ಯಾಸ ಭಾರತದ ಹತ್ತು ಪರ್ವಗಳು ಮತ್ತು ಮೂಲಭಾರತದ ಶಾಂತಿಪರ್ವ, ಅನುಶಾಸನ ಪರ್ವಗಳನ್ನು ೨೦೦ ಕ್ಯಾಸೆಟ್‌ಗಳಲ್ಲಿ ಹೊರತಂದಿರುವ ಶ್ರೀ ಮತ್ತೂರರು ಒಂದು ಸ್ವಾತಿಮುತ್ತು.

ಎಂ.ಪಿ. ಬಿರ್ಲಾ ಸಂಸ್ಥೆಯ ಸಂಸ್ಕೃತ ಶಾಲೆಯ ಪ್ರಾದೇಶಿಕ ನಿರ್ದೇಶಕರಾಗಿ, ಬ್ರಿಟಿಷ್ ರಾಜ್ಯದ ಫೆಲೋಆಫ್ ರಾಯಲ್ ಏಷಿಯಾಟಿಕ್ ಸೊಸೈಟಿಯ ಸದಸ್ಯರಾಗಿ, ಬ್ರಿಟಿಷ್ ಮಹಾರಾಣಿಯವರ ಬಂದೀಖಾನೆ ಸುವ್ಯವಸ್ಥೆ ಸಮಿತಿಯ ಸದಸ್ಯರಾಗಿ, ಬ್ರಿಟಿಷ್ ಮಾಧ್ಯಮಿಕ ಶಾಲೆಯ ಸಮಿತಿಯ ಸದಸ್ಯರಾಗಿ ಪ್ರಸ್ತುತದಲ್ಲಿ ಸೇವಾ ನಿರತರಾಗಿರುವ ಶ್ರೀ ಕೃಷ್ಣಮೂರ್ತಿಯವರು ಆಡಂಬರ, ಅಬ್ಬರ, ಪ್ರಚಾರಗಳಿಂದ ದೂರವಿದ್ದು ಸೇವೆಯೇ ದೇವರಪೂಜೆ ಎಂದು ನಂಬಿನಡೆದಿ ರುವ ಅಪ್ಪಟ ಅಪರಂಜಿ. ಶ್ರೀಯುತರ ಮಾತು ಮಲ್ಲಿಗೆಯಷ್ಟು ಮೃದು, ಸಂಪಿಗೆಯಂತೆ ಕಂಪು, ಮಾವಿನ ಹಣ್ಣಿನಂತೆ ರಸದ ರುಚಿ, ಮುಖದಲ್ಲಿ ಸೌಮ್ಯ ಶಿವತೇಜಸ್ಸು, ನೊಸಲ ವಿಭೂತಿಯ ಚೆಲುವು, ತುಂಬು ಮುಗುಳ್ನಗೆಯ ಶಾಂತಕಾಂತಿಯ ಶ್ರೀಯುತರು ಸಂಭಾವಿತತೆಯ ಸಾಕಾರಮೂರ್ತಿ.

ಶ್ರೀ ಮತ್ತೂರು ಕೃಷ್ಣಮೂರ್ತಿಯವರ ಪ್ರತಿಭೆಯನ್ನು, ಸೇವಾಶೀಲತೆಯನ್ನು, ಮನಗಂಡ ಶ್ರೀ ಸಿದ್ಧಗಂಗಾ ಮಠದ ಭಕ್ತಾದಿಗಳು, ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು ಮತ್ತು ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ವಿವಿಧ ಶಿಕ್ಷಣ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಬಂಧು-ಭಗಿನಿಯರು ಶ್ರೀಮಠದ ಅಧ್ಯಕ್ಷರಾಗಿರುವ ಭಾರತೀಯ ಸಂಸ್ಕೃತಿಯೇ ಸಾಕಾರಗೊಂಡಂತಿರುವ ತ್ರಿವಿಧ ದಾಸೋಹಿ ಜಂಗಮನಿರಂಜನ ಮೂರ್ತಿ ಬಸವತತ್ತ್ವಾರಾಧಕರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೯೬ನೆಯ ಜನ್ಮದಿನೋತ್ಸವ ಗುರುವಂದನ ಪವಿತ್ರ ಸಮಾರಂಭಗಳಲ್ಲಿ ಶ್ರೀಯುತರನ್ನು ''ಸಾರಸ್ವತಲೋಕದ ಸ್ವಾತಿಮುತ್ತು'' ಎಂದು ಗೌರವಿಸಿ ಸನ್ಮಾನಿಸಲಾಯಿತು.

❀

## ಸಿದ್ಧಗಂಗೆಯ ಸಿದ್ಧ



ಕಾಣದಾ ನೆಲೆಯಿಂದ ಬೆಂದ ಈ ನೆಲಕೆ
ಗಂಗೆ ಇಳಿಯುವ ಮೋಡಿ ಮಾಡಿದವನಲ್ಲ ನೀನು
ಜನಮನದ ಆಳದಲಿ ಗುಪ್ತಗಾಮಿನಿ ಗಂಗೆ
ಉಚ್ಚರಿಸಿ ಪುಟಿವಂತೆ ಹೋರಾಡಿದವ ನೀನು;
ಒಂದು ಕಲ್ಲಿನ ಶವಕೆ ಕಾಲು ತಾಗಿಸಿ, ಮತ್ತೆ
ಮರುಜನ್ಮ ನೀಡಿದವನಲ್ಲ ನೀನು;
ಕಗ್ಗತ್ತಲೆಯ ಕೊಳ್ಳದ ಖಂಡ ಬಂಡೆಗೆ, ದೃಷ್ಟಿ
ಪರುಷದಾ ಹೊಸಹುಟ್ಟ ಕೊಟ್ಟೆ ನೀನು.
ವಿದ್ಯೆ ಕಲಿಸಿದ ಬಳಿಕ ಹೆಬ್ಬೆರಳ ಕಾಣಿಕೆಯ
ನೀಡೆಂದು ಕೇಳಿದವನಲ್ಲ ನೀನು;
ಒಳಬೆಳಗಿನಲಿ ನಿಂದು ಅವರ ತಪ್ಪಿಗೆ ನೊಂದು
ಪ್ರಾರ್ಥಿಸುತ, ಕರುಣೆ ದಯೆ ಸುರಿಸಿದವ ನೀನು.
ಅರಸು ಪರಿವಾರಕ್ಕೆ ರಾಜಾತಿಥ್ಯವನು ನೀಡಿ
ಕಾಮಧೇನುವಿನ ಸಿರಿಋಷಿಯಲ್ಲ ನೀನು;
ನೆಲದ ಮಕ್ಕಳ ಮುಕ್ತದಾನಶಕ್ತಿಯ ಧಾರೆ
ವಿರಕ್ತಿ ಭಕ್ತಿಯ ನಿತ್ಯದಾಸೋಹಿ ನೀನು.
ಸಾಧನೆಯ ಪಥದಲ್ಲಿ ಕಾಯಕದ ಹೆಜ್ಜೆಗಳ
ನಿಟ್ಟ ಬೆಟ್ಟಕೆ ಸಿದ್ಧಗಂಗೆ ಹೆಸರಾಯ್ತು
ನಾಡುನುಡಿಗಳ ಕಾಯ ಚೇತನದ ನಿಧಿ ನಿನ್ನ
ನಡೆ ನುಡಿಯ ಮಹಿಮೆಯೇ ಜನಕೆ ಉಸಿರಾಯ್ತು !

- ಡಾ. ದೇವೇಂದ್ರಕುಮಾರ ಹಕಾರಿ







## ವಚನಗಳ ವಿಶ್ಲೇಷಣೆ

– ಸಂ. ಡಾ. ಎಲ್. ಬಸವರಾಜು
ವಿಶ್ರಾಂತ ಪ್ರಾಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು.

*ಕಾಲಲಿ ಕಟ್ಟಿದ ಗುಂಡು !*
*ಕೊರಳಲಿ ಕಟ್ಟಿದ ಬೆಂಡು !*
*ತೇಲಲೀಯದು ಗುಂಡು !*
*ಮುಳುಗಲೀಯದು ಬೆಂಡು !*
*ಇಂತಪ್ಪ ಸಂಸಾರ ಶರಧಿಯ ದಾಂಟಿಸಿ*
*ಕಾಲಾಂತಕನೇ ಕಾಯೋ ಕೂಡಲಸಂಗಯ್ಯ !*

ಶಿವದೀಕ್ಷೆ ಪಡೆದು, ಲಿಂಗವನ್ನು ಕೊರಳಲ್ಲಿ ಬಸವಣ್ಣನವರಿಗೆ ಅದರಿಂದ ಸಂಸಾರಸಾಗರವನ್ನು ಈಸಬಹುದೆಂಬ ಧೈರ್ಯವಿದೆ. ಆದರೆ, ಸಂಸಾರವ್ಯಾಮೋಹ ವ್ಯವಹಾರದ ಭಾರ ಅವರನ್ನು ತಾವು ನಿರೀಕ್ಷಿಸಿದಷ್ಟು ಊರ್ಧ್ವಗಾಮಿಯಾಗಲು ಬಿಡದೆ ಅಧೋಗಾಮಿಯಾಗಿ ಅದುಮುವ ಕೆಲವು ವಿಷನಿಮಿಷಗಳಲ್ಲಿ ಅವರ ಧೈರ್ಯ ಕಲಕಿ ಹೋಗಿ, ಕೊರಳಲ್ಲಿ ಕಟ್ಟಿದ ಲಿಂಗ ಬೆಂಡಿನಂತೆ ತಾರಕವಾದರೂ, ಸಂಸಾರವು ಗುಂಡಿನಂತೆ ಭಾರವಾಗಿ ತಮ್ಮ ಆಧ್ಯಾತ್ಮಿಕ ಚಲನವಲನಕ್ಕೆ ಆತಂಕಕಾರಿಯೆನಿಸಿತು. ಈ ವಿಷಮಪರಿಸ್ಥಿತಿಯಲ್ಲಿ ಬಸವಣ್ಣನವರು ಅತೀತಶಕ್ತಿಯನ್ನು ಆಹ್ವಾನಿಸಿ ದೇವರಿಗೆ ಮೊರೆಯಿಟ್ಟಿರುವರು :

ಬರಿಯ ಬೆಂಡು ಕಟ್ಟಿಕೊಂಡು ನೀರಿಗಿಳಿದವನು ಸುರಕ್ಷಿತ ! ಸ್ವಪ್ರಯತ್ನದಿಂದ ಅವನು ಕಡಲನ್ನಾದರೂ ದಾಟುವುದು ಸಾಧ್ಯವಿದೆ. ಬರಿಯ ಗುಂಡನ್ನು ಕಟ್ಟಿಕೊಂಡವನು ತದ್ವಿರುದ್ಧ! ಮುಳುಗುವುದು ಖಚಿತ! ಆದರೆ ಕೊರಳಲ್ಲಿ ಬೆಂಡುಕಟ್ಟಿ ಕಾಲಲ್ಲಿ ಗುಂಡುಕಟ್ಟಿ ನೀರಿಗಿಳಿದವನಾದರೋ ಗುಂಡಿರುವುದರಿಂದ ತೇಲದೆ, ಬೆಂಡಿರುವುದರಿಂದ ಮುಳುಗದೆ; ಬದುಕದೆ; ಮರಣ ಹೊಂದದೆ; ಬದುಕಿನ ಮಿಡುಕಿಲ್ಲದೆ, ಮರಣದ ಸ್ತಬ್ಧತೆಯಿಲ್ಲದೆ, ಜೀವನ್ಮೃತಕನಾಗಿ, ತಾನೂ ಚಿಂತಾಮನಸ್ಕನಾಗಿ ನೋಡಿದವರಿಗೂ ಚಿಂತಾಜನಕನಾಗಿರುವನು. ಶಿವದೀಕ್ಷೆ ತೊಟ್ಟು ಲಿಂಗವನ್ನು ಕೊರಳಿಗೆ ಕಟ್ಟಿ ಈ ಸಂಸಾರಶರಧಿಯನ್ನು ದಾಂಟುವೆನೆಂದ ಬಸವಣ್ಣನವರಿಗೆ ನಿರಂಕುಶರಾಜರ ರಾಜಕೀಯ ಪದವಿ ಹೀಗೆ ಕಾಲಿಗೆ ಗುಂಡಿನಂತೆ ತೊಡರಿತು. ಅತ್ತ ದೈವ ಇತ್ತ ದೆವ್ವ – ಎರಡನ್ನೂ ಆರಾಧಿಸುವುದೆಂತು? ಅರೆಕ್ಷಣ ಅಧಿಕಾರ ತಾಮಸದ ಆಳಕ್ಕಿಳಿಯುವುದು, ಮರುಕ್ಷಣ ಶಿವಧ್ಯಾನದ ಶೃಂಗಕ್ಕೇರುವುದು, ಏರುವಾಗ ತಾಮಸದ ಭಾರ, ಇಳಿಯುವಾಗ ಧ್ಯಾನದ ವಿವಶತೆ. ಹೀಗಾಗಿ ಬಸವಣ್ಣನವರ ಜೀವನದ ಆಧ್ಯಾತ್ಮಿಕ ಮತ್ತು ಲೌಕಿಕವೆಂಬ ಎರಡೂ ಮಾರ್ಗದಲ್ಲಿ ಪ್ರಗತಿಯು ತಾತ್ಕಾಲಿಕವಾಗಿ ಕುಂಠಿತವಾಯಿತು. ಆಗ ಅವರು ದೇವರಿಗೆ ಮೊರೆಯಿಟ್ಟುದು – ಪಾರುಮಾಡೆಂದು.

*ಮಾಡಿ ನೀಡಿ ಲಿಂಗವ ಪೂಜಿಸಿಹೆನೆಂಬವರು*
*ನೀವೆಲ್ಲ ಕೇಳಿರಣ್ಣ :*
*ಹಾಗದ ಕೆರಹ ಹೊರಗೆ ಕಳೆದು*
*ದೇಗುಲಕ್ಕೆ ಹೋಗಿ ದೇವರಿಗೆ ನಮಸ್ಕಾರವ ಮಾಡುವನಂತೆ*
*ತನ್ನ ಕೆರಹಿನ ಧ್ಯಾನವಲ್ಲದೆ, ದೇವರ ಧ್ಯಾನವಿಲ್ಲ !*
*ಧನವನಿರಿಸದಿರಾ !*
*ಇರಿಸಿದರೆ ಭವ ತಪ್ಪದು !*
*ಕೂಡಲಸಂಗನ ಶರಣರಿಗೆ ಸವೆಸಲೆ ಬೇಕು*

ಧರ್ಮಕಾರ್ಯಗಳನ್ನು ಮಾಡಿ, ದಾನ ನೀಡಿ, ಲಿಂಗಪೂಜೆಯನ್ನು ಮಾಡುತ್ತಿರುವೆವೆಂಬ ಕೆಲವು ಪಂಚಕಜನ – ತೋರಿಕೆಗಾಗಿ ಅಲ್ಪ-ಸ್ವಲ್ಪ ದಾನಮಾಡಿ, ಎಲ್ಲವನ್ನೂ ಲೋಕಸೇವೆಗಾಗಿ ವ್ಯಯಮಾಡಿದೆವೆನ್ನುತ್ತ, ತಮ್ಮ ಅಪಾರ ಐಶ್ವರ್ಯವನ್ನೆಲ್ಲ ಯಾರೂ ಕಾಣದಂತೆ ಹೂತಿಟ್ಟಿರುವುದನ್ನು ಕುರಿತು ಬಸವಣ್ಣನವರು ಕಟಕಿಯಾಡುತ್ತಿರುವರು :

ಒಂದು ಒರೆಯಷ್ಟು ಹೊನ್ನನ್ನಾಗಲಿ, ಒಂದು ಎಳೆಯಷ್ಟು ಬಟ್ಟೆಯನ್ನಾಗಲಿ, ಇಂದಿಗೆ ನಾಳೆಗೆಂದು, ತನಗೆಂದು ತನ್ನ ಹೆಂಡತಿ-ಮಕ್ಕಳಿಗೆಂದು ಇಡದ ನಿಸ್ವಾರ್ಥಜೀವನದ ಬಸವಣ್ಣನವರಿಗೆ ಧನಪಿಶಾಚಪ್ರವೃತ್ತಿ ರುಚಿಸದು. ಅದಕ್ಕೆ ಕಾರಣ : ಕೂಡಿಟ್ಟ ಹಣದ ಕಡೆಗೇ ಗಮನ ಹರಿಯುವುದೇ ಹೊರತು, ದೇವರ ಧ್ಯಾನ ಮತ್ತು ಧರ್ಮದ ಕಡೆಗಲ್ಲ! ಪಾದರಕ್ಷೆಯಂತಹ ಅಗ್ಗದ ವಸ್ತುವನ್ನು ಹೊರಗೆ ಬಿಟ್ಟು, ದೇವರ ದರ್ಶನಕ್ಕೆಂದು ದೇವಾಲಯ ಪ್ರವೇಶಿಸಿದವನ ಮನವೆಲ್ಲ ತನ್ನ ಪಾದರಕ್ಷೆ ಏನಾಯಿತೋ, ಯಾರು ಒಯ್ದರೋ ಎಂಬತ್ತ ತುಯ್ಯುತ್ತಿರುವುದು. ಅಂಥವನಿಗೆ ಇನ್ನು ದೇವರ ಧ್ಯಾನವೆಲ್ಲಿ ಬಂತು? ಹಾಗೆಯೇ ಅಲ್ಪ ಐಶ್ವರ್ಯದ ಕಡೆ ಮನಸ್ಸಿಟ್ಟು, ಅನಲ್ಪ-ಶಿವ ಸುಖವನ್ನು ಕಳೆದುಕೊಳ್ಳುವುದು ಬೇಡವೆನ್ನುವರು ಅಣ್ಣನವರು.

ಕೂಡಿಟ್ಟ ಹಣ ನಿರರ್ಥಕವಾಗಿ ಒಂದೆಡೆ ಇರುವುದಲ್ಲದೆ, ಅದರಿಂದ ಮಾನವನ ಮಾನಸಿಕ ಸ್ವಾಸ್ಥ್ಯವೂ ಮಾಯವಾಗುವುದು. ಇದಕ್ಕೆ ಪರಿಹಾರವೆಂದರೆ – ಐಶ್ವರ್ಯವನ್ನೆಲ್ಲಾ ಲೋಕಸೇವೆಗೆ ಸವೆಸುವುದೊಂದೇ. ಅದೇ ಅಣ್ಣನವರ ಅಮರ ಸಂದೇಶ.

*(ಕೃಪೆ : ಬಸವ ವಚನಾಮೃತ)*



# ವಚನ ಸಾಹಿತ್ಯ ಪ್ರಸ್ತುತತೆ

– ಡಾ. ಜಿ.ಬಿ. ವಿಸಾಜಿ
ತಹಸೀಲ್ದಾರ ಕಛೇರಿ ಹತ್ತಿರ,
ಭಾಲ್ಕಿ – 585328.

**ಯಾ**ವ ಸಾಹಿತ್ಯದ ಅಧ್ಯಯನದಿಂದ ವ್ಯಕ್ತಿಗಳಲ್ಲಿ ಹುದುಗಿ ಕೊಂಡಿದ್ದ ಸದ್‌ವೃತ್ತಿಗಳು ಅರಳಿ, ಅವರೆಲ್ಲರ ಮನ-ಬುದ್ಧಿ-ಭಾವಗಳು ಪ್ರಕಾಶಮಯವೂ, ಆನಂದತುಂದಿಲವೂ ಆಗಬಲ್ಲವೋ ಅಂತಹ ಸಾಹಿತ್ಯವೇ ಉತ್ತಮ ಸಾಹಿತ್ಯ. ಈ ದೃಷ್ಟಿಯಿಂದ ವಚನ ಸಾಹಿತ್ಯ ಉತ್ತಮ ಸಾಹಿತ್ಯವಾಗಿದೆ.

ವಚನ ಸಾಹಿತ್ಯ ಕನ್ನಡ ಭಾಷೆಯ ವಿಶೇಷ ಸಂಪತ್ತಾಗಿದೆ. ಅದು ಶರಣರ ಸ್ವಾರ್ಜಿತ ಸ್ವತ್ತು. ಅದು 'ಗೀತಮಾತೆಂಬ ಜ್ಯೋತಿ'. ಅದು 'ಸೂಳ್ನುಡಿ'. ಅದು ಮಾತೆಂಬ ಜ್ಯೋತಿರ್ಲಿಂಗ.



*''ಅಮೃತದ ಕೂಪ ಪ್ರಭುವಿನ ವಾಕ್ಯ,*
*ಸಕ್ಕರೆಯ ರಾಶಿ ಬಸವೇಶ್ವರನ ವಾಕ್ಯ,*
*ಚಿಂತಾಮಣಿ ಗುರುವಿನ ಚೆನ್ನಬಸವಣ್ಣನ ವಾಕ್ಯ,*
*ಎನ್ನ ಸಿದ್ಧರಾಮನ ವಾಕ್ಯ ಕಪಿಲೆಯ ತುಪ್ಪ,*
*ಸರ್ವಪ್ರಥಮರ ವಾಕ್ಯ ಕಪಿಲಸಿದ್ಧ ಮಲ್ಲಿಕಾರ್ಜುನ*
*ಮಾಯಾ ತಮಂಧ ಸೂರ್ಯನೋಡಾ*
*ಕೇದಾರಯ್ಯಾ''.*

**ಈ** ಸಿದ್ಧರಾಮನ ವಚನ ವಿವಿಧ ಶರಣರ ವಚನಗಳ ವೈಶಿಷ್ಟ್ಯ ಮತ್ತು ಮಹತ್ವವನ್ನು ಪರಿಣಾಮ ವನ್ನು ಸಾರುತ್ತದೆ. ವಚನ ಸಾಹಿತ್ಯ ಕನ್ನಡದ ಬಹುದೊಡ್ಡ ಸಾಂಸ್ಕೃತಿಕ ಸಂಪತ್ತು. ವಚನ ಸಾಹಿತ್ಯದಲ್ಲಿ ವ್ಯಕ್ತಿಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ವರ್ಣಭೇದ, ಲಿಂಗಭೇದ ನಿರಾಕರಣೆಗಳಂಥ ವಿಚಾರಗಳು ಸ್ಫೋಟಗೊಂಡದ್ದು ಲಕ್ಷಿಸತಕ್ಕ ಸಂಗತಿಯಾಗಿದೆ. ಕೇವಲ ಪಾಂಡಿತ್ಯ ಕವಿತಾಶಕ್ತಿಗಳಿಂದ ವಚನಸಾಹಿತ್ಯ ನಿರ್ಮಾಣವಾಗಲಿಲ್ಲ. ವಚನ ಸಾಹಿತ್ಯ ಸೃಷ್ಟಿಗೆ ಮೂಲಕಾರಣ ಶರಣರ ಜೀವನ ಸಿದ್ಧಿ, ವ್ಯಕ್ತಿತ್ವ ಪರಿಣತಿ ಮುಖ್ಯವಾಗಿವೆ. ಶಿವಶರಣರ ಜೀವನ ಮತ್ತು ಅವರ ವಚನ ಸಾಹಿತ್ಯ ಜನಜೀವನವನ್ನು ನಿರ್ಮಲವಾಗಿಯೂ, ಸಮೃದ್ಧವಾಗಿಯೂ ಮಾಡಲಿಕ್ಕೆ ಸಮರ್ಥವಾಗಿವೆ. ವಚನ ಸಾಹಿತ್ಯ ಚಳುವಳಿಯ ನೇತೃತ್ವವನ್ನು ಬಸವಣ್ಣನವರು ವಹಿಸಿ ಕೊಂಡಿದ್ದರು. ಕಾದಂಬರಿ ಸಾರ್ವಭೌಮ ಅ.ನ. ಕೃಷ್ಣರಾಯರು – ''ಬಸವಭಾನು ಉದಯ ದಿಂದ ಕನ್ನಡಜನ, *ಧರ್ಮ, ಸಂಸ್ಕೃತಿ ಗಳಿಗೆ ಹೊಸ ಜೀವ ಬಂದಂತೆ, ಕನ್ನಡ ಸಾಹಿತ್ಯಕ್ಕೂ ಹೊಸ ಜೀವ ಬಂತು''* – ಎಂದು ಹೇಳಿದ್ದಾರೆ. ಆರ್ಥರ್ ಮೈಲ್ಸ್ ''ಭಾರತದ ಮೊಟ್ಟಮೊದಲನೆಯ ಸ್ವತಂತ್ರ ವಿಚಾರವಾದಿ ಬಸವಣ್ಣನವರು ಭಾರತದ ಮಾರ್ಟಿನ್ ಲೂಥರ್ ಕಿಂಗ್'' ಎಂದು ಸಾರಿದ್ದಾರೆ. ರಾಷ್ಟ್ರಕವಿ ಕುವೆಂಪು ಅವರು ''ಬಸವೇಶ್ವರರ ಸಾಮಾಜಿಕ ಪರಿವರ್ತನೆ ಅದ್ಭುತವಾಗಿದೆ. ಅವರು ಹೋದ ಮಟ್ಟಕ್ಕೆ ನಾವು ಈಗಲೂ ಬಂದಿಲ್ಲ. ಅವರು ಒಬ್ಬ ಬ್ರಾಹ್ಮಣಳಾದ ಹುಡುಗಿ ಯನ್ನು ದಲಿತನಿಗೆ ಮದುವೆಮಾಡಿಸಿದ್ದಾರೆ. ಎಂಟುನೂರು ವರ್ಷಗಳ ಹಿಂದೆ ಏನು, ಯಾವ ಧೈರ್ಯದಿಂದ ಮಾಡಿರಬೇಕು? ಏನು ಕೆಚ್ಚಿರಬೇಕು?'' ಎಂದು ದಿಗ್ಭ್ರಮೆ ವ್ಯಕ್ತಪಡಿಸಿದ್ದಾರೆ.

ಶರಣರು ಅಸ್ಪೃಶ್ಯತೆಯನ್ನು ಬೇರು ಸಹಿತ ಕಿತ್ತುಹಾಕಲು ಪ್ರಯತ್ನಿಸಿದ್ದಾರೆ. ಸಮತೆಯನ್ನು ಸಾರಿದ್ದಾರೆ. ಅಸ್ಪೃಶ್ಯರನ್ನು ಆತ್ಮೀಯತೆಯಿಂದ ಗೌರವಿಸಿದ್ದಾರೆ.

**''ಅಪ್ಪನು ನಮ್ಮ ಮಾದರ ಚನ್ನಯ್ಯ**
**ಬೊಪ್ಪನು ನಮ್ಮ ಡೋಹರ ಕಕ್ಕಯ್ಯ**
**ಚಿಕ್ಕಯ್ಯನೆಮ್ಮಯ್ಯ ಕಾಣಯ್ಯ**
**ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ**
**ಎನ್ನನೇತಕ್ಕರಿಯರಿ ಕೂಡಲಸಂಗಯ್ಯ''**

ಎಂಬ ಬಸವಣ್ಣನವರ ವಚನವನ್ನೇ ನೋಡಬಹುದು. ವೇಶ್ಯಾ ಪುತ್ರನೇ ಆಗಿರಲಿ, ದಾಸಿ ಪುತ್ರನೇ ಆಗಿರಲಿ, ಶಿವದೀಕ್ಷೆಯಾದ ಬಳಿಕ, ಸಾಕ್ಷಾತ್ ಶಿವನೆಂದು ಕರೆತಂದು ಪೂಜಿಸಿ, ಪಾದೋದಕ, ಪ್ರಸಾದ ಸ್ವೀಕರಿಸುವುದೇ ವೀರಶೈವರ ಲಕ್ಷಣವಾಗಿದೆ. ವೀರಶೈವರಲ್ಲಿ ಜಾತಿ ಇಲ್ಲ. ವಿಪ್ರಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲ ಒಂದೇ ಎಂಬ ಭಾವ ಅವರದು. ಬಸವಣ್ಣನವರು ಧರ್ಮದ ತಳಹದಿಯ ಮೇಲೆ, ನೀತಿಯ ನೆಲೆಗಟ್ಟಿನ ಮೇಲೆ, ಮಾನವೀಯ ಸಾಮಾಜಿಕ ಮೌಲ್ಯಗಳ,





ವೈಜ್ಞಾನಿಕ ಮನೋಭಾವದ ಆಧಾರದ ಮೇಲೆ ಸಮಾಜದ ಸಂಘಟನೆ ಮಾಡಿದ್ದಾರೆ. ಅಂದಿನ ಸಂಘಟನೆಯ ಅಗತ್ಯ ಇಂದು ಕೂಡ ಇದೆ.

ಶರಣರು ಪಂಚಾಂಗ ನಿರಾಕರಣೆ ಮಾಡಿದ್ದಾರೆ.

*''ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯಾ,*
*ರಾಶಿಕೂಟ ಋಣಸಂಬಂಧವುಂಟೆಂದು ಹೇಳಿರಯ್ಯಾ,*
*ಚಂದ್ರಬಲ ತಾರಾಬಲವುಂಟೆಂದು ಹೇಳಿರಯ್ಯಾ,*
*ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ,*
*ಕೂಡಲಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯಾ''.*

ಎಂಬ ಬಸವಣ್ಣನವರ ವಚನದಲ್ಲಿ ಸ್ಪಷ್ಟವಾಗಿ ಕಾಣಬಹುದು. ಶರಣರು ದೇವನೊಬ್ಬನೇ ಎಂದು ಹೇಳಿದರು. ಅಂಧಃಶ್ರದ್ಧೆ, ಮೂಢನಂಬಿಕೆಗಳನ್ನು ಹೋಗಲಾಡಿಸಲು ಶರಣರು ಪ್ರಯತ್ನಿಸಿದ್ದಾರೆ. ವಚನ ಸಾಹಿತ್ಯದಲ್ಲಿ ಶರಣರು ಹೆಣ್ಣು-ಗಂಡುಗಳಲ್ಲಿರುವ ಭೇದವನ್ನು ತೆಗೆಯಲು ಪ್ರಯತ್ನಿಸಿ, ಸ್ತ್ರೀಯರಿಗೂ ಪುರುಷರಿಗಿರುವ ಸ್ಥಾನಮಾನಗಳನ್ನು ನೀಡಿ ಗೌರವಿಸಿದ್ದಾರೆ. ಹೆಣ್ಣು ಮತ್ತು ಗಂಡು ಭೌತಿಕನೆಲೆಯಲ್ಲಿ ಭಿನ್ನರೇವಿನಹ ಸಾಮಾಜಿಕ ನೆಲೆಯಲ್ಲಿ ಅಲ್ಲವೆಂದರು. ''ಹೆಣ್ಣು ಮಾಯೆಯಲ್ಲ, ಹೊನ್ನು ಮಾಯೆಯಲ್ಲ, ಮಣ್ಣು ಮಾಯೆಯಲ್ಲ, ಮನದ ಮುಂದಣ ಆಸೆಯೇ ಮಾಯೆ'' – ಎಂದು ಅಲ್ಲಮಪ್ರಭು ತಿಳಿಸಿದ್ದಾರೆ.

**ಅ**ರ್ಥಶಾಸ್ತ್ರವು ನೈತಿಕ ಪಾತಳಿಯ ಮೇಲೆ ನಿಲ್ಲಬೇಕು ಎಂಬುದನ್ನು ಶರಣರು ಹನ್ನೆರಡನೆಯ ಶತಮಾನದಲ್ಲಿಯೇ ಸಮಾಜದಲ್ಲಿ ಕಾರ್ಯರೂಪಕ್ಕೆ ತಂದರು. ನೀತಿ ಎಂದರೆ ಸದಾಚಾರ. ತನ್ನೊಬ್ಬನ ಸುಖವನ್ನು ಮಾತ್ರ ಎಣಿಸದೆ, ಇತರರ ಹಿತವನ್ನೂ ಎಣಿಸುವುದೇ ನೀತಿ. ಉದ್ಯಮಿಯ ದೃಷ್ಟಿ ತನ್ನ ಲಾಭದಲ್ಲೇ ನೆಟ್ಟಿರದೇ ಎಲ್ಲರ ಅನುಕೂಲವನ್ನು ಸಾಧಿಸುವಲ್ಲಿ ಗಮನಹರಿಸಬೇಕು. ದುರಾಚಾರಕ್ಕೆ ಎಡೆ ಇರಬಾರದು. ನೀತಿಗೆಟ್ಟು ಆಢ್ಯರಾಗಬೇಕಾದ ಅಗತ್ಯವಿಲ್ಲ. ವಚನಸಾಹಿತ್ಯ ವ್ಯಕ್ತಿಯ ಬೆಳವಣಿಗೆ ಹಾಗೂ ಸಮಾಜದ ಬೆಳವಣಿಗೆ ಎರಡಕ್ಕೂ ಮಹತ್ವ ನೀಡಿದೆ.

**ಜ**ಗತ್ತಿನ ಅಶಾಂತಿಗೆ ಆರ್ಥಿಕ ಅಸಮಾನತೆಯೂ ಕಾರಣವಾಗಿದೆ. ಅದಕ್ಕಾಗಿಯೇ ಶರಣರು ಕಾಯಕ ಮತ್ತು ದಾಸೋಹದ ಕಲ್ಪನೆಗಳನ್ನು ಕೊಟ್ಟರು. ಕಾಯಕ ಸತ್ಯಶುದ್ಧವಾಗಿರಬೇಕು. ತನುವ ಬಳಲಿಸಿ ತಂದು ದಾಸೋಹವ ಮಾಡಬೇಕು. ಶರಣರು 'ಕಾಯಕವೇ ಕೈಲಾಸ'ವೆಂದರು. ಶರಣರು ಇಂದಿಂಗೆ, ನಾಳಿಂಗೆ ಎಂದು ಸಂಗ್ರಹಿಸಲು ಮನಸ್ಸು ಮಾಡಲಿಲ್ಲ.

**ಈ**ಗ ನಡೆದಿರುವ ಅಶಾಂತಿಯ ಘಟನೆಗಳಿಗೆ, ಆಂತಕವಾದಕ್ಕೆ ಜನಾಂಗೀಯ ಅಸಮತೆಯೇ ಕಾರಣವಾಗಿದೆ. ಶರಣರು ಮಾನವಕುಲ ಒಂದು. ಸಕಲ ಜೀವಿಗಳ ಲೇಸಾಗಬೇಕು. ''ಇವ ನಮ್ಮವ ಇವ ನಮ್ಮವ'' ಎಂಬ ವಿಶ್ವಬಂಧುತ್ವ ಪರಸ್ಪರರಲ್ಲಿ ಮೂಡಬೇಕು ಎಂಬುದನ್ನು ಸಾರಿದ್ದಾರೆ. ಸಮತಾ ಭಾವಕ್ಕೆ ಒತ್ತು ನೀಡಿದ್ದಾರೆ. ಇದು ಇಂದಿನ ಅಗತ್ಯವಾಗಿದೆ.

**ಎ**ಲ್ಲ ಅಶಾಂತಿಗೂ ಮುಖ್ಯವಾಗಿ ಮನುಷ್ಯನ ಮನಸ್ಸೇ ಕಾರಣ. ಅದಕ್ಕಾಗಿ ಬಸವಣ್ಣನವರು ''ಲೋಕದ ಡೊಂಕ ನೀವೇಕೆ ತಿದ್ದುವಿರಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ'' – ಎಂದು ತುಂಬಾ ಕಳಕಳಿಯಿಂದ ಹೇಳಿದ್ದಾರೆ. ವ್ಯಕ್ತಿ ಸುಧಾರಣೆಯಾದರೆ, ಇಡೀ ಜಗತ್ತು ಸುಧಾರಣೆಯಾಗುತ್ತದೆ. ಆದ್ದರಿಂದ ಮೊದಲು ವ್ಯಕ್ತಿ ಸುಧಾರಣೆಯಾಗಬೇಕು. ಅದಕ್ಕಾಗಿಯೇ ಅವರು ''ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗಶುದ್ಧಿ, ಇದೇ ನಮ್ಮ ಕೂಡಲಸಂಗಮ ದೇವನೊಲಿಸುವ ಪರಿ'' ಎಂದು ಹೇಳಿರುವ ವಚನಕಾರರು ಮನುಷ್ಯನ ಅಂತರಂಗ ಶುದ್ಧಿ, ಬಹಿರಂಗ ಶುದ್ಧಿಗೆ ಹೆಚ್ಚಿನ ಒತ್ತು ಕೊಟ್ಟಿದ್ದಾರೆ.

**ಜ**ಗತ್ತಿನ ಅಶಾಂತಿಗೆ ಮನುಷ್ಯನ ದುರಾಶೆಯೇ ಕಾರಣವಾಗಿದೆ. ಸ್ವಾರ್ಥ, ಪ್ರತಿಷ್ಠೆ, ಅತಿಯಾಶೆ, ಮಾತ್ಸರ್ಯ, ದ್ವೇಷ, ಈರ್ಷೆ ಇವುಗಳೇ ಇಂದಿನ ಜಗತ್ತಿನ ಅಶಾಂತಿಗೆ ಕಾರಣವಾಗಿವೆ. ಆದ್ದರಂದ ವಿಶ್ವಶಾಂತಿಗೆ ಅತ್ಯಂತ ಪ್ರಗತಿಪರವಾದ, ವೈಜ್ಞಾನಿಕವಾದ, ಸರ್ವರಿಗೂ ಸರ್ವಕಾಲಕ್ಕೂ ಮಾನ್ಯವಾದ, ಮಾನವೀಯಮೌಲ್ಯಗಳುಳ್ಳ, ಬಸವಾದಿ ಶರಣರ ವಚನಗಳ ತಿಳುವಳಿಕೆ ಅಗತ್ಯವಾಗಿದೆ. ನಾವೂ ಒಳ್ಳೆಯವರಾಗಿ ನಡೆದು, ನಮ್ಮ ಸುತ್ತಮುತ್ತಲಿನವರೂ ಸುಖವಾಗಿ ಬಾಳಬೇಕಾದರೆ ಇಂದು ಶರಣರ ಮಾರ್ಗವಲ್ಲದೆ ಬೇರೆ ಮಾರ್ಗವಿಲ್ಲ. ಶರಣರು ತಮ್ಮ ವಚನಗಳಿಂದ ವಿಶ್ವಶಾಂತಿಗೆ, ವಿಶ್ವಬಂಧುತ್ವಕ್ಕೆ ಬಹಳ ದೊಡ್ಡ ಕೊಡುಗೆ ಕೊಟ್ಟಿದ್ದಾರೆ. ಮಹಾತ್ಮಗಾಂಧೀಜಿ ಅವರು ''ಬಸವಣ್ಣನವರು ಉಪದೇಶಿಸಿರುವ ತತ್ತ್ವಗಳನ್ನು ಆಚರಣೆಯಲ್ಲಿ ತಂದರೆ, ಭರತಭೂಮಿಯನ್ನಷ್ಟೇ ಏಕೆ ಜಗತ್ತನ್ನೇ ಉದ್ಧಾರಮಾಡಬಹುದು'' ಎಂದು ಹೇಳಿರುವುದು ಅರ್ಥಪೂರ್ಣವಾಗಿದೆ.

**ಶ**ರಣರಿಗೆ ಇಡೀ ಸಮಾಜ ವ್ಯವಸ್ಥೆಯೇ ಬದಲಾಗಬೇಕಾಗಿತ್ತು. ಧಾರ್ಮಿಕ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಆಮೂಲಾಗ್ರ ಬದಲಾವಣೆ ತರುವುದೇ ಅವರ ಮುಖ್ಯ ಉದ್ದೇಶವಾಗಿತ್ತು. ಈ ದೇಶ ಕಂಡ ಪ್ರಥಮ ಮತ್ತು ಪ್ರಗತಿಪರ ಹೋರಾಟ ಶರಣರ ವಚನ ಚಳುವಳಿಯಾಗಿದೆ. ಅವರ ವಚನ ಸಾಹಿತ್ಯ ಇಂದಿಗೂ ಪ್ರಸ್ತುತವಾಗಿದೆ.

❑

## ಬೆಂಗಳೂರು ನಗರದ ಚಂದ್ರಾ ಬಡಾವಣೆಯ ''ಸಿದ್ಧಗಂಗಾ ಶ್ರೀ ಶಿವಕುಮಾರ ಸ್ವಾಮೀಜಿ ಪಬ್ಲಿಕ್ ಶಾಲೆ''ಯ ವಾರ್ಷಿಕೋತ್ಸವ



ಪೊಲೀಸ್ ವರಿಷ್ಠಾಧಿಕಾರಿಗಳು ಶ್ರೀ ಎಲ್. ರೇವಣಸಿದ್ದಯ್ಯ ಶಾಲಾವಾರ್ಷಿಕೋತ್ಸವದ ಉದ್ಘಾಟನೆ. ಚಿತ್ರದಲ್ಲಿ ಶ್ರೀ ವಿ.ಜಿ. ಹಿರೇಮಠ್, ಶ್ರೀ ಬಿ.ಎನ್. ಚನ್ನಪ್ಪ, ಶ್ರೀ ಟಿ.ಬಿ. ವಿರೂಪಾಕ್ಷಯ್ಯ, ಹಾಗೂ ಶ್ರೀ ರಂಗಹನುಮಯ್ಯನವರು.

**ಬೆಂ**ಗಳೂರು ನಗರದ ಚಂದ್ರಾ ಬಡಾವಣೆಯಲ್ಲಿರುವ ''ಸಿದ್ಧಗಂಗಾ ಪಬ್ಲಿಕ್ ಶಾಲೆ''ಯ ಆವರಣದಲ್ಲಿ ಶಾಲಾ ವಾರ್ಷಿಕೋತ್ಸವ ಸಮಾರಂಭವನ್ನು ಇತ್ತೀಚೆಗೆ ನಿವೃತ್ತ ಪೊಲೀಸ್ ವರಿಷ್ಠಾಧಿಕಾರಿಗಳು ಹಾಗೂ ಸಿದ್ಧಗಂಗಾ ಶ್ರೀ ಶಿವಕುಮಾರ ಸ್ವಾಮೀಜಿ ಪಬ್ಲಿಕ್ ಶಾಲೆಯ ಅಧ್ಯಕ್ಷರೂ ಆದ ಶ್ರೀ ಎಲ್. ರೇವಣಸಿದ್ಧಯ್ಯನವರು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿ ''ಎಲ್ಲಾ ವರ್ಗದ ಜನರಿಗೆ ಉತ್ತಮಮಟ್ಟದ ಶಿಕ್ಷಣವನ್ನು ನೀಡುವುದು ಪೂಜ್ಯ ಸ್ವಾಮಿಜೀಯವರ ಮುಖ್ಯ ಗುರಿಯಾಗಿದೆ, ಯಾವ ಮಕ್ಕಳಿಗೆ ಓದುವುದರಲ್ಲಿ ಹೆಚ್ಚು ಆಸಕ್ತಿ ಇದ್ದು ಕಡುಬಡತನ ಅದಕ್ಕೆ ಅಡ್ಡಿಯಾಗಿದ್ದರೆ, ಅಂತಹ ಮಕ್ಕಳಿಗೆ ನಾವು ಸಹಾಯ ಮಾಡಲು ಸಿದ್ಧರಾಗಿದ್ದೇವೆ'' ಎಂದು ತಿಳಿಸಿದರಲ್ಲದೆ ''ಈ ನಮ್ಮ ಶಾಲೆಯಲ್ಲಿ ಪ್ರಸ್ತುತ ಪ್ಲೇ ಹೋಂನಿಂದ ಹಿಡಿದು ಎಸ್.ಎಸ್.ಎಲ್.ಸಿ.ಯವರೆವಿಗೂ ಉತ್ತಮ ಮಟ್ಟದ ಶಿಕ್ಷಣವನ್ನು ನುರಿತ ಹಾಗೂ ಅಪಾರ ಅನುಭವವುಳ್ಳ ಶಿಕ್ಷಕರಿಂದ ನೀಡಲಾಗುತ್ತಿದೆ. ಮುಂದಿನ ಶೈಕ್ಷಣಿಕ ಸಾಲಿನಲ್ಲಿ ಪದವಿಪೂರ್ವ ಕಾಲೇಜನ್ನೂ ಸಹ ಆರಂಭಿಸುತ್ತಿದ್ದೇವೆ. ಇಂತಹ ಸುಸಜ್ಜಿತವಾದ ಶಾಲೆಗೆ ತಮ್ಮ ಮಕ್ಕಳನ್ನು ಸೇರಿಸಿದರೆ ಅವರಿಗೆ ಉತ್ತಮ ಶಿಕ್ಷಣ ದೊರೆತು ಉಜ್ವಲ ಭವಿಷ್ಯ ಅವರದಾಗುತ್ತದೆ'' ಎಂದು ತಿಳಿಸಿದರು. ಮುಖ್ಯ ಅತಿಥಿಗಳಾಗಿ ಕೆ.ಎ.ಎಸ್. ಹಿರಿಯ ಅಧಿಕಾರಿಗಳಾದ ಶ್ರೀ ಶಿವಾನಂದ ಶರ್ಮರವರು, ಶಾಲೆಯ ಆಡಳಿತ ಮಂಡಲಿಯ ಕಾರ್ಯದರ್ಶಿಯವರೂ ಹಾಗೂ ನಿವೃತ್ತ ಚೀಫ್ ಇಂಜಿನಿಯರ್ ಆದ ಶ್ರೀ ಬಿ.ಎನ್. ಚನ್ನಪ್ಪನವರು, ಖಜಾಂಚಿಗಳಾದ ಶ್ರೀ ಟಿ.ಬಿ. ವಿರೂಪಾಕ್ಷಯ್ಯನವರು ಹಾಗೂ ಸದಸ್ಯರಾದ ಶ್ರೀ ಮಾದಯ್ಯನವರು, ಶ್ರೀ ರಂಗಹನುಮಯ್ಯ, ಶ್ರೀ ಸಿದ್ಧಲಿಂಗಯ್ಯ ನವರು ವೇದಿಕೆಯ ಮೇಲೆ ಉಪಸ್ಥಿತರಿದ್ದರು. ಶಾಲಾ ಮಕ್ಕಳು ಹಾಗೂ ಬೃಹತ್ ಸಂಖ್ಯೆಯಲ್ಲಿ ಪೋಷಕ ವರ್ಗದವರೂ ಸಮಾರಂಭದಲ್ಲಿ ಭಾಗವಹಿಸಿದ್ದರು.

ಶಾಲೆಯ ಪ್ರಾಂಶುಪಾಲರಾದ ಶ್ರೀ ವಿ.ಜಿ. ಹಿರೇಮಠ್‌ರವರು ಸ್ವಾಗತಿಸಿ, ಶಾಲಾ ''ವಾರ್ಷಿಕ ವರದಿ''ಯನ್ನು ವಾಚಿಸಿದರು. ವಿವಿಧ ಕ್ರೀಡೆಗಳು ಮತ್ತು ಸಾಂಸ್ಕೃತಿಕ ಸ್ಪರ್ಧೆಗಳಲ್ಲಿ ಭಾಗವಹಿಸಿ, ಉತ್ತಮ ಪ್ರದರ್ಶನ ತೋರಿದ ಮಕ್ಕಳಿಗೆ ವೇದಿಕೆಯ ಮೇಲಿದ್ದ ಗಣ್ಯರು ಬಹುಮಾನಗಳನ್ನು ವಿತರಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀ ಶಿವಾನಂದ ಶರ್ಮರವರು ಮಾತನಾಡಿ 'ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಮಹದೋದ್ದೇಶದ ಈ ಸಂಸ್ಥೆಯು ಬೇರೆಲ್ಲಾ ಶಾಲೆಗಳಿಗಿಂತಲೂ ವಿಭಿನ್ನವಾಗಿದೆ. ಇದು ಸುಸಜ್ಜಿತ ಶಾಲೆಯಾಗಿದ್ದು ಉಜ್ವಲ ಭವಿಷ್ಯವನ್ನು ಹೊಂದಿದೆ' ಎಂದು ತಿಳಿಸಿದರು.

ಈ ಸಂದರ್ಭದಲ್ಲಿ ಅತಿ ಹೆಚ್ಚು ಅಂಕಗಳನ್ನು ಗಳಿಸಿದ ಹತ್ತನೇ ತರಗತಿಯ ವಿದ್ಯಾರ್ಥಿ 'ಕೆ. ಸತೀಶ್‌ರವರಿಗೆ ವರ್ಷದ ಉತ್ತಮ ವಿದ್ಯಾರ್ಥಿ' ಎಂದು ಘೋಷಿಸಿ ನಗದು ಬಹುಮಾನ ವಿತರಿಸಿದರು.

ಸಮಾರಂಭದ ಅಂಗವಾಗಿ ಶಾಲಾ ಮಕ್ಕಳು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಟ್ಟರು. ಮಕ್ಕಳಲ್ಲಿರುವ ಸುಪ್ತ ಪ್ರತಿಭೆಯನ್ನು ಅಭಿವ್ಯಕ್ತಿಗೊಳಿಸಲು ಸದಾವಕಾಶವನ್ನು ಒದಗಿಸಿಕೊಟ್ಟ ಶಾಲಾ ಆಡಳಿತ ಮಂಡಳಿ ಹಾಗೂ ಪ್ರೋತ್ಸಾಹ ನೀಡಿದ ಪೋಷಕರು ಅಭಿನಂದನಾರ್ಹರು, ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

ವರದಿ : ಟಿ.ಸಿ. ಸುಧಾಮಣಿ





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೮೮೧. | ಶ್ರೀ ಬೋಜಯ್ಯ<br>ಸಹ ಶಿಕ್ಷಕರು | ೨,೨೫೧.೦೦ |
| ೮೮೨. | ಶ್ರೀ ಹೆಚ್. ಮೌಳೇಶಯ್ಯ<br>ಸಹ ಶಿಕ್ಷಕರು | ೨,೧೦೧.೦೦ |
| ೮೮೩. | ಶ್ರೀ ವಿ.ಎನ್. ಜಗದೀಶ್<br>ಸಹ ಶಿಕ್ಷಕರು | ೨,೨೫೧.೦೦ |
| ೮೮೪. | ಶ್ರೀ ಜಿ. ಪರಮಶಿವಯ್ಯ<br>ಸಹ ಶಿಕ್ಷಕರು | ೨,೨೫೧.೦೦ |
| ೮೮೫. | ಶ್ರೀ ಜಿ. ಗಂಗಾಧರಯ್ಯ<br>ಸಹ ಶಿಕ್ಷಕರು | ೨,೨೫೧.೦೦ |
| ೮೮೬. | ಶ್ರೀ ಎಂ. ಗಣೇಶ್<br>ದೈಹಿಕ ಶಿಕ್ಷಣ ಶಿಕ್ಷಕರು | ೨,೧೦೧.೦೦ |
| ೮೮೭. | ಶ್ರೀಮತಿ ಬಿ.ಎಸ್. ನೀಲಮ್ಮ<br>ಸಹ ಶಿಕ್ಷಕಿ | ೨,೫೦೧.೦೦ |
| ೮೮೮. | ಶ್ರೀಮತಿ ಹೆಚ್.ಹೆಚ್. ಪಂಕಜಾಕ್ಷಮ್ಮ<br>ಸಹ ಶಿಕ್ಷಕಿ | ೨,೧೦೧.೦೦ |
| ೮೮೯. | ಶ್ರೀಮತಿ ಡಿ. ಮಹಾಲಕ್ಷ್ಮೀದೇವಿ<br>ಸಹ ಶಿಕ್ಷಕಿ | ೨,೨೫೧.೦೦ |
| ೮೯೦. | ಶ್ರೀ ಎನ್.ವಿ. ವಿರುಪಾಕ್ಷಯ್ಯ<br>ಸಹ ಶಿಕ್ಷಕರು | ೨,೧೦೧.೦೦ |
| ೮೯೧. | ಶ್ರೀಮತಿ ಹೆಚ್. ಶಾರದಮ್ಮ<br>ಸಹ ಶಿಕ್ಷಕಿ | ೨,೨೫೧.೦೦ |
| ೮೯೨. | ಶ್ರೀಮತಿ ವಸಂತಮ್ಮ<br>ಸಹ ಶಿಕ್ಷಕಿ | ೨,೨೫೧.೦೦ |
| ೮೯೩. | ಶ್ರೀ ಹೆಚ್.ಎನ್. ರಂಗಸ್ವಾಮಯ್ಯ<br>ಸಹ ಶಿಕ್ಷಕರು | ೨,೧೦೧.೦೦ |
| ೮೯೪. | ಶ್ರೀ ಜಿ.ವಿ. ರಾಜಣ್ಣ<br>ಸಹ ಶಿಕ್ಷಕರು | ೨,೨೫೧.೦೦ |
| ೮೯೫. | ಶ್ರೀಮತಿ ಪಿ.ಹೆಚ್. ಶಶಿಕಲಾ<br>ಸಹ ಶಿಕ್ಷಕಿ | ೨,೧೦೧.೦೦ |
| ೮೯೬. | ಶ್ರೀಮತಿ ಎಂ.ಕೆ. ರಮಾ<br>ಸಹ ಶಿಕ್ಷಕಿ | ೨,೨೫೧.೦೦ |
| ೮೯೭. | ಶ್ರೀಮತಿ ಎಸ್. ಗಂಗಮ್ಮ<br>ಸಹ ಶಿಕ್ಷಕಿ | ೨,೨೫೧.೦೦ |
| ೮೯೮. | ಶ್ರೀಮತಿ ಮಹಾದೇವಿ<br>ಸಹ ಶಿಕ್ಷಕರು | ೨,೨೫೧.೦೦ |
| ೮೯೯. | ಶ್ರೀ ಕೆ.ಹೆಚ್. ವಸಂತ್‌ಕುಮಾರ್<br>ಸಹ ಶಿಕ್ಷಕರು | ೨,೨೫೧.೦೦ |
| ೯೦೦. | ಶ್ರೀ ಡಿ.ಪಿ. ಮಂಜುನಾಥ್<br>ಸಹ ಶಿಕ್ಷಕರು | ೨,೨೫೧.೦೦ |
| ೯೦೧. | ಶ್ರೀ ಹೆಚ್.ಪಿ. ಮಹಾರುದ್ರಯ್ಯ<br>ಸಹ ಶಿಕ್ಷಕರು | ೨,೨೫೧.೦೦ |
| ೯೦೨. | ಶ್ರೀಮತಿ ಕೆ.ಆರ್. ನಾಗರತ್ನ<br>ಸಹ ಶಿಕ್ಷಕಿ | ೨,೧೦೧.೦೦ |
| ೯೦೩. | ಶ್ರೀ ಆರ್. ಲಕ್ಷ್ಮಗೌಡ<br>ಸಹ ಶಿಕ್ಷಕರು | ೨,೧೦೧.೦೦ |
| ೯೦೪. | ಶ್ರೀಮತಿ ಶೈಲಕುಮಾರಿ<br>ಸಹ ಶಿಕ್ಷಕಿ | ೨,೨೫೧.೦೦ |
| | ಕ್ರಮ ಸಂಖ್ಯೆ ೮೮೧ ರಿಂದ ೯೦೪ರವರೆಗಿನವರ ವಿಳಾಸ<br>ಶ್ರೀ ಸಿದ್ಧಲಿಂಗೇಶ್ವರ ಸನಿವಾಸ<br>ಹಿರಿಯ ಪ್ರಾಥಮಿಕ ಶಾಲೆ, ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು ಮತ್ತು ಜಿಲ್ಲೆ. | |
| ೯೦೫. | ಶ್ರೀ ಆರ್.ಎನ್. ನರಸಿಂಹಮೂರ್ತಿ<br>ನಿವೃತ್ತ ಅಡ್ವೋಕೇಟ್ ಜನರಲ್<br>ಶೇಷಾದ್ರಿಪುರಂ,<br>ಬೆಂಗಳೂರು – ೫೬ ೦೨೦. | ೧೦,೦೦೦.೦೦ |
| ೯೦೬. | ಶ್ರೀ ಎಂ. ವಸಂತ್, ಬಿ.ಇ., (ಮೆಕ್ಯಾನಿಕಲ್)<br>ಭಾಗ್ಯಲಕ್ಷ್ಮೀ ಇಂಡಸ್ಟ್ರೀಯಲ್ ಕಾರ್ಪೋರೇಷನ್<br>೨ನೇ ಕ್ರಾಸ್, ಪೀಣ್ಯ ಕೈಗಾರಿಕಾ ಎಸ್ಟೇಟ್<br>೧ನೇ ಹಂತ, ಬೆಂಗಳೂರು. | ೨,೦೦೦.೦೦ |
| ೯೦೭. | ಶ್ರೀಮತಿ ಜಯಶ್ರೀ ನಾಗರಾಜು<br>ನಂ. ೭೫, ೩ನೇ ಕ್ರಾಸ್, ೪ನೇ ಹಂತ,<br>ಬಿ.ಇ.ಎಂ.ಎಲ್. ಬಡಾವಣೆ,<br>ರಾಜರಾಜೇಶ್ವರಿ ನಗರ<br>ಬೆಂಗಳೂರು – ೫೬೦ ೦೯೮.<br>(ದಿ. ಶ್ರೀಮತಿ ರಾಜಮ್ಮನವರ ಸ್ಮರಣಾರ್ಥ) | ೫,೦೦೧.೦೦ |
| ೯೦೮. | ಶ್ರೀಮತಿ ಜಯಶ್ರೀ ನಾಗರಾಜು<br>ನಂ. ೭೫, ೩ನೇ ಕ್ರಾಸ್, ೪ನೇ ಹಂತ,<br>ಬಿ.ಇ.ಎಂ.ಎಲ್. ಬಡಾವಣೆ,<br>ರಾಜರಾಜೇಶ್ವರಿ ನಗರ<br>ಬೆಂಗಳೂರು – ೫೬೦ ೦೯೮. | ೫,೦೦೧.೦೦ |
| ೯೦೯. | ಶ್ರೀ ಜಿ.ಹೆಚ್. ಪರಮಶಿವಯ್ಯ<br>ಶ್ರೀಮತಿ ಚಂದ್ರಮ್ಮ ನಂದನ,<br>೪ನೇ ಕ್ರಾಸ್, ಗಾಂಧಿನಗರ,<br>ತುಮಕೂರು. | ೨೫,೦೦೮.೦೦ |

*(ಮುಂದುವರಿಯುತ್ತದೆ)*

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೪೮೬. | **ಶ್ರೀ ಜಿ. ಹೊನ್ನಗಂಗಯ್ಯ**<br>ನಿವೃತ್ತ ಶಿಕ್ಷಕರು,<br>ಶಿವಗಂಗಾ ಮುಖ್ಯರಸ್ತೆ, ಕುದೂರು,<br>ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೪೮೭. | **ಶ್ರೀ ಪರಮಶಿವಯ್ಯ**<br>ನಿವೃತ್ತ ಶಿಕ್ಷಕರು,<br>ಹಳ್ಳಿಕೇರೆ, ಬಾರುದೂಕ್ ಅಂಚೆ,<br>ಭದ್ರಾವತಿ ತಾಲ್ಲೂಕು,<br>ಶಿವಮೊಗ್ಗ ಜಿಲ್ಲೆ. | ೧,೦೦೧.೦೦ |
| ೪೮೮. | **ಶ್ರೀ ಹೆಚ್.ಎಂ. ತಿಮ್ಮಪ್ಪ**<br>ಸಹ ಶಿಕ್ಷಕರು,<br>ಶ್ರೀ ಗಣೇಶ ಗ್ರಾ. ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |
| ೪೮೯. | **ಶ್ರೀ ಶಿವಾನಂದಯ್ಯ**<br>ಸಹ ಶಿಕ್ಷಕರು,<br>ಶ್ರೀ ಗಣೇಶ ಗ್ರಾ.ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |
| ೪೯೦. | **ಶ್ರೀ ಎಸ್.ಸಿ. ಈಶ್ವರಯ್ಯ**<br>ಸಹ ಶಿಕ್ಷಕರು,<br>ಶ್ರೀ ಗಣೇಶ ಗ್ರಾ.ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |
| ೪೯೧. | **ಶ್ರೀ ಎ. ಚೆನ್ನವೀರಪ್ಪ**<br>ಸಹ ಶಿಕ್ಷಕರು,<br>ಶ್ರೀ ಗಣೇಶ ಗ್ರಾ. ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |
| ೪೯೨. | **ಶ್ರೀಮತಿ ಟಿ.ಎಸ್. ಭ್ರಮರಾಂಬ**<br>ಸಹ ಶಿಕ್ಷಕರು,<br>ಶ್ರೀ ಗಣೇಶ ಗ್ರಾ. ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |
| ೪೯೩. | **ಶ್ರೀ ಎನ್. ಬಸವರಾಜಪ್ಪ**<br>ಸಹ ಶಿಕ್ಷಕರು,<br>ಶ್ರೀ ಗಣೇಶ ಗ್ರಾ. ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |
| ೪೯೪. | **ಶ್ರೀ ಎಂ.ಹೆಚ್. ಷರೀಫ್**<br>ಹಿಂದಿ ಶಿಕ್ಷಕರು,<br>ಶ್ರೀ ಗಣೇಶ ಗ್ರಾ. ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |
| ೪೯೫. | **ಶ್ರೀ ಎನ್. ರಂಗಸ್ವಾಮಯ್ಯ**<br>ದೈಹಿಕ ಶಿಕ್ಷಕರು,<br>ಶ್ರೀ ಗಣೇಶ ಗ್ರಾ. ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |
| ೪೯೬. | **ಶ್ರೀ ಟಿ.ಎನ್. ಅಶ್ವತ್ಥಪ್ಪ**<br>ವೃತ್ತಿ ಶಿಕ್ಷಕರು,<br>ಶ್ರೀ ಗಣೇಶ ಗ್ರಾ. ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |
| ೪೯೭. | **ಶ್ರೀ ನಾಗರಾಜಯ್ಯ**<br>ದ್ವಿತೀಯ ದರ್ಜೆ ಸಹಾಯಕರು,<br>ಶ್ರೀ ಗಣೇಶ ಗ್ರಾ. ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |
| ೪೯೮. | **ಶ್ರೀ ಮುನಿಯಲ್ಲಪ್ಪ**<br>ಗ್ರಂಥಪಾಲಕ<br>ಶ್ರೀ ಗಣೇಶ ಗ್ರಾ. ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |
| ೪೯೯. | **ಶ್ರೀ ರೇಣುಕಯ್ಯ**<br>ಪ್ರ.ಶಾ.ಸ.<br>ಶ್ರೀ ಗಣೇಶ ಗ್ರಾ. ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |
| ೫೦೦. | **ಶ್ರೀ ಜಿ.ಎಸ್. ಗಣಪತಿ**<br>ಸೇವಕ,<br>ಶ್ರೀ ಗಣೇಶ ಗ್ರಾ. ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |
| ೫೦೧. | **ಶ್ರೀ ಕೆ.ಆರ್. ಸಿದ್ಧರಾಮಯ್ಯ**<br>ಸೇವಕ,<br>ಶ್ರೀ ಗಣೇಶ ಗ್ರಾ. ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |
| ೫೦೨. | **ಶ್ರೀ ಮೈಲಾರಪ್ಪ**<br>ಸಹ ಶಿಕ್ಷಕರು,<br>ಶ್ರೀ ಗಣೇಶ ಗ್ರಾ. ಸಂ. ಪದವಿ ಪೂರ್ವ ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು | ೧,೦೦೧.೦೦ |

(ಮುಂದುವರಿಯುತ್ತದೆ)

## ಶೋಷಿತರ ಮೂಕ ವೇದನೆಗೆ ದನಿ ನೀಡಿದ ಮಹಾನ್ ಚೇತನ ಭಾರತರತ್ನ ಡಾ. ಬಿ.ಆರ್. ಅಂಬೇಡ್ಕರ್

ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ನೇತೃತ್ವದ ಕರ್ನಾಟಕ ಸರ್ಕಾರ ಡಾ. ಅಂಬೇಡ್ಕರ್ ಅವರ ಆಶಯಗಳಿಗೆ ಪೂರಕವಾಗಿ ಶೋಷಿತರ ಸರ್ವಾಂಗೀಣ ಅಭಿವೃದ್ಧಿಗೆ ಹಲವಾರು ಯೋಜನೆಗಳನ್ನು ಹಮ್ಮಿಕೊಂಡು ಅನುಷ್ಠಾನಗೊಳಿಸುತ್ತಿದೆ.

- ✧ ಪರಿಶಿಷ್ಟ ಜಾತಿ, ವರ್ಗದವರಿಗೆ ಮೀಸಲಿರಿಸಿದ ೧೬೮೦೦ ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ.
- ✧ ನೇರ ಸಂವಾದ ಕಾರ್ಯಕ್ರಮದಡಿ ದೌರ್ಜನ್ಯಕ್ಕೊಳಗಾಗಿ ನೊಂದ ಪರಿಶಿಷ್ಟ ಜಾತಿ, ವರ್ಗದ ಸಂತ್ರಸ್ಥರಿಗೆ ಸುಮಾರು ಮೂರು ಕೋಟಿ ರೂ.ಗಳ ಪರಿಹಾರ ಧನ.

*ಶಿಕ್ಷಣ*

- ✧ ಪರಿಶಿಷ್ಟ ಜಾತಿಯ ೨೫ ಲಕ್ಷ ವಿದ್ಯಾರ್ಥಿಗಳಿಗೆ ರೂ. ೪೭ ಕೋಟಿಗಳ ಹಾಗೂ ಪರಿಶಿಷ್ಟ ವರ್ಗದ ೫.೫೦ ಲಕ್ಷ ವಿದ್ಯಾರ್ಥಿಗಳಿಗೆ ರೂ. ೧೦.೫೦ ಕೋಟಿಗಳ ವಿವಿಧ ರೀತಿಯ ವಿದ್ಯಾರ್ಥಿ ವೇತನಗಳ ಮಂಜೂರು.
- ✧ ಉನ್ನತ ವ್ಯಾಸಂಗಕ್ಕಾಗಿ ವಿದೇಶಿ ವಿದ್ಯಾರ್ಥಿನಿಲಯಗಳಲ್ಲಿ ಆಯ್ಕೆಯಾಗಿರುವ ಪರಿಶಿಷ್ಟ ಜಾತಿಯ ೧೯ ವಿದ್ಯಾರ್ಥಿಗಳಿಗೆ ರೂ. ೧.೨೮ ಕೋಟಿಗಳ ಧನ ಸಹಾಯ ಮತ್ತು ಉನ್ನತ ವ್ಯಾಸಂಗಕ್ಕಾಗಿ ಈ ಬಾರಿ ಪರಿಶಿಷ್ಟ ವರ್ಗದ ೫ ಅಭ್ಯರ್ಥಿಗಳ ಆಯ್ಕೆ.

*ವಸತಿ*

- ✧ ರೂ. ೨೦ ಕೋಟಿಗಳ ವೆಚ್ಚದಲ್ಲಿ ಪರಿಶಿಷ್ಟ ಜಾತಿಯ ೧೦೦೦೦ ಜನರಿಗೆ ಹಾಗೂ ತಲಾ ರೂ. ೧೦ ಕೋಟಿಗಳ ವೆಚ್ಚದಲ್ಲಿ ೫೦೦೦ ದೇವದಾಸಿ ಮಹಿಳೆಯರಿಗೆ ಹಾಗೂ ಪರಿಶಿಷ್ಟ ವರ್ಗದ ೫೦೦೦ ಜನರಿಗೆ ಅಂಬೇಡ್ಕರ್ ಮನೆಗಳ ನಿರ್ಮಾಣ.
- ✧ ರೂ. ೬೫ ಕೋಟಿಗಳ ವೆಚ್ಚದಲ್ಲಿ ಪರಿಶಿಷ್ಟ ಜಾತಿಯ ೬೫೦೦೦ ಜನರಿಗೆ ರೂ. ೧೫ ಕೋಟಿಗಳ ವೆಚ್ಚದಲ್ಲಿ ಪರಿಶಿಷ್ಟ ವರ್ಗದ ೧೫೦೦೦ ಜನರಿಗೆ ಆಶ್ರಯ ಮನೆಗಳ ನಿರ್ಮಾಣ.

*ವಿಶೇಷ ಘಟಕ ಯೋಜನೆ, ಗಿರಿಜನ ಯೋಜನೆ*

- ✧ ಪರಿಶಿಷ್ಟ ಜಾತಿಯ ೧,೭೫,೦೦೦ ಫಲಾನುಭವಿಗಳಿಗೆ ವಿಶೇಷ ಘಟಕ ಯೋಜನೆಯಡಿ ಮತ್ತು ಪರಿಶಿಷ್ಟ ವರ್ಗದ ೨೯,೦೦೦ ಫಲಾನುಭವಿಗಳಿಗೆ ಗಿರಿಜನ ಉಪಯೋಜನೆಯಡಿ ವಿವಿಧ ಸೌಲಭ್ಯ.

*ಕರ್ನಾಟಕ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ*

- ✧ ಪರಿಶಿಷ್ಟ ಜಾತಿಯ ೧೪೯೬೭ ಹಾಗೂ ಪರಿಶಿಷ್ಟ ವರ್ಗದ ೨೦೬೨ ಜನರಿಗೆ ಸಾಲ ಸೌಲಭ್ಯ.

*ಭೂ ಒಡೆತನ ಯೋಜನೆ*

- ✧ ರೂ. ೪.೬೦ ಕೋಟಿಗಳ ವೆಚ್ಚದಲ್ಲಿ ಪರಿಶಿಷ್ಟ ಜಾತಿಯ ೭೩೩ ಫಲಾನುಭವಿಗಳಿಗೆ ೧೨೫೦ ಎಕರೆ ಜಮೀನು ವಿತರಣೆ.
- ✧ ರೂ. ೧ ಕೋಟಿ ವೆಚ್ಚದಲ್ಲಿ ಪರಿಶಿಷ್ಟ ವರ್ಗದ ೧೯೦ ಫಲಾನುಭವಿಗಳಿಗೆ ೨೪೪ ಎಕರೆ ಜಮೀನು ವಿತರಣೆ.

*ಗಂಗಾ ಕಲ್ಯಾಣ*

- ✧ ರೂ. ೫ ಕೋಟಿಗಳ ವೆಚ್ಚದಲ್ಲಿ ಪರಿಶಿಷ್ಟ ಜಾತಿಯ ೧೮೬ ಮತ್ತು ಪರಿಶಿಷ್ಟ ವರ್ಗದ ೪೭ ಜನರಿಗೆ ಕೊಳವೆ ಬಾವಿಗಳ ನಿರ್ಮಾಣ.
- ✧ ರೂ. ೧೮ ಕೋಟಿಗಳ ವೆಚ್ಚದಲ್ಲಿ ಪರಿಶಿಷ್ಟ ಜಾತಿಯ ೧೭೧೮ ಮತ್ತು ಪರಿಶಿಷ್ಟ ವರ್ಗದ ೪೨೦ ಫಲಾನುಭವಿಗಳಿಗೆ ವೈಯಕ್ತಿಕ ಬಾವಿಗಳ ನಿರ್ಮಾಣ.
- ✧ ೧೫೯ ದೇವದಾಸಿ ಮಹಿಳೆಯರಿಗೆ ರೂ. ೪೩ ಲಕ್ಷಗಳ ಸಾಲ ಸಹಾಯಧನ ಮಂಜೂರು.
- ✧ ೧೯೭೮ ಸಫಾಯಿ ಕರ್ಮಚಾರಿಗಳಿಗೆ ರೂ. ೩.೫೦ ಕೋಟಿಗಳ ವೆಚ್ಚದಲ್ಲಿ ಪುನರ್‌ವಸತಿ ಸೌಲಭ್ಯ

*೨೦೦೩-೦೪ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಉದ್ದೇಶಿಸಿರುವ ಪ್ರಮುಖ ಕಾರ್ಯಕ್ರಮಗಳು*

- ✧ ರಾಜ್ಯದ ಬಿಜಾಪುರ, ಬಾಗಲಕೋಟೆ, ಬೀದರ್, ರಾಯಚೂರು, ಗುಲಬರ್ಗಾ, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಪರಿಶಿಷ್ಟ ಜಾತಿಯವರಿಗೆ ೨೫ ಮತ್ತು ಪರಿಶಿಷ್ಟ ವರ್ಗದವರಿಗೆ ೨೫ ವಿದ್ಯಾರ್ಥಿನಿಲಯಗಳ ಪ್ರಾರಂಭ.
- ✧ ರೂ. ೩೦ ಕೋಟಿಗಳ ವೆಚ್ಚದಲ್ಲಿ ಪರಿಶಿಷ್ಟ ಜಾತಿಯವರಿಗೆ ೧೫೦೦೦ ಮನೆಗಳು ಮತ್ತು ರೂ. ೧೦ ಕೋಟಿ ವೆಚ್ಚದಲ್ಲಿ ಪರಿಶಿಷ್ಟ ವರ್ಗದವರಿಗೆ ೫೦೦೦ ಅಂಬೇಡ್ಕರ್ ಮನೆಗಳು ಹಾಗೂ ರೂ. ೬೦ ಕೋಟಿ ವೆಚ್ಚದಲ್ಲಿ ಪರಿಶಿಷ್ಟ ಜಾತಿಯವರಿಗೆ ೬೦೦೦೦ ಆಶ್ರಯ ಮನೆಗಳು ಮತ್ತು ರೂ. ೧೫ ಕೋಟಿ ವೆಚ್ಚದಲ್ಲಿ ಪರಿಶಿಷ್ಟ ವರ್ಗದವರಿಗೆ ೧೫೦೦೦ ಆಶ್ರಯ ಮನೆಗಳ ನಿರ್ಮಾಣ.
- ✧ ವಿಶೇಷ ಘಟಕ ಯೋಜನೆಯಡಿ ಪರಿಶಿಷ್ಟ ಜಾತಿಯ ೧,೭೫,೦೦೦ ಜನರಿಗೆ ಗಿರಿಜನ ಉಪಯೋಜನೆಯಡಿ ಪರಿಶಿಷ್ಟ ವರ್ಗ ೩೦೦೦೦ ಜನರಿಗೆ ವಿವಿಧ ಸೌಲಭ್ಯ.
- ✧ ಪರಿಶಿಷ್ಟ ಜಾತಿಯ ೪೦೦೦ ಹಾಗೂ ಪರಿಶಿಷ್ಟ ವರ್ಗದ ೧೦೦೦ ಮಹಿಳಾ ನಿರುದ್ಯೋಗಿ ಅಭ್ಯರ್ಥಿಗಳಿಗೆ ಕೌಶಲ್ಯ ಯೋಜನೆಯಡಿ ವಿವಿಧ ವೃತ್ತಿಗಳಲ್ಲಿ ತರಬೇತಿ.
- ✧ ಪರಿಶಿಷ್ಟ ಜಾತಿ ಮತ್ತು ವರ್ಗದ ನಿಗಮದಿಂದ ಪರಿಶಿಷ್ಟ ಜಾತಿಯ ೧೨೩೪೪ ಮತ್ತು ಪರಿಶಿಷ್ಟ ವರ್ಗದ ೩೫೬೨ ಜನರಿಗೆ ವಿವಿಧ ಸೌಲಭ್ಯಗಳನ್ನು ಕಲ್ಪಿಸಲಾಗುವುದು.
- ✧ ಪರಿಶಿಷ್ಟ ಜಾತಿಯ ೪೦೦೦ ಮತ್ತು ಪರಿಶಿಷ್ಟ ವರ್ಗದ ೧೦೦೦ ಫಲಾನುಭವಿಗಳಿಗೆ ಗಂಗಾ ಕಲ್ಯಾಣ ಯೋಜನೆ ಸೌಲಭ್ಯ.

ಕರ್ನಾಟಕ ವಾರ್ತೆ



*With Best Compliments from*



# SIDDAGANGA SREE SHIVAKUMARA SWAMIJI VIDYAPEETHA TRUST

C.A. Site No. 1, 1st Stage, 2nd Phase, Chandra Layout,
**BANGALORE - 560 072**

Phone : 3397600



*Admissions are open for Classes Play Home, Nursery, Primary up to V - C.B.S.E. Syllabus*
*High School - State Syllabus.*
*I P.U.C. College - Science and Commerce*

RNI No. 17139/69 "Siddaganga" Monthly - postal Reg.No. KA/SK/TMR/385/2003-05




ಏಪ್ರಿಲ್ ೨೪ರಂದು ಹರಳೂರಿನಲ್ಲಿ ಏರ್ಪಡಿಸಿದ್ದ ಶ್ರೀ ವೀರಭದ್ರಸ್ವಾಮಿ ನೂತನ ರಥ ಉದ್ಘಾಟನೆ, ಗ್ರಾಮಾಂತರ ಬಸವ ಜಯಂತಿ ಹಾಗೂ ಗುರುವಂದನ ಕಾರ್ಯಕ್ರಮವನ್ನು ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಸಿದ್ಧಗಂಗಾ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.




ಸಿದ್ಧಗಂಗಾ ಕಿರಿಯ ಶ್ರೀಗಳಿಂದ ಆಶೀರ್ವಚನ